

# ಸಪ್ತಗಿರಿ

ಅಕ್ಟೋಬರ್, 1993

ಬೆಲ : ರೂ. 2/-









ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ



ಶರಣು ವೆಂಕಟ ರಮಣ ನಿನ್ನ ಚರಣವ ನಂಬಿದೆ ನಾನು || ಪ ||

ಕರುಣಾಸಾಗರ ಕಾಮಿತ ಫಲವೀವ ಶರಣ ಭಕ್ತರ ಕಾವ ಗರುಡವಾಹನ ದೇವ || ಅ.ಪ. ||

ಭಕ್ತ ವತ್ಸಲ ಹರಿಯೆ ನಮ್ಮ ಭವದುರಿತ ಪರಿಹಾರನೆ
ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ ಶರಣಭಕ್ತರ ಕಾವ ಸುರಮುನಿಗಳ ದೇವ || ೧ ||

ಪಾಪವಿನಾಶಿನಿ ತೀರ್ಥ ನಮ್ಮ ಪಾತಕವ ಪರಿಹರಿಸೆ
ಶ್ರೀ ವೆಂಕಟ ಗಿರಿ ಶ್ರೀನಿವಾಸ ಕೋನೇರಿ ತೀರ್ಥಾದಿವಾಸ ನಿವಾಸ || ೨ ||

ದೇಶಕಧಿಕವಾದ ನಮ್ಮ ಶೇಷಗಿರಿಯಲಿ ವಾಸ
ಶ್ರೀ ವೆಂಕಟ ಗಿರಿ ತಿರುಮಲೇಶ ದಾಸರ ದಾಸರ ಸಲಹುವ ಪುರಂದರವಿಠಲ || ೩ ||

---ಶ್ರೀ ಪುರಂದರದಾಸರು.

ಸಂದರ್ಶಿಸಿ. ಆನಂದಿಸಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು



# ವಾರ್ಷಿಕ ಬ್ರಹ್ಮೋತ್ಸವಗಳು

9--11--93 ರಿಂದ 18--11--93 ವರೆಗೆ

**ಕಾರ್ಯಕ್ರಮ ವಿವರ**

| ದಿನಾಂಕ | ದಿನ | ಬೆಳಗ್ಗೆ | ಸಂಜೆ |
|---|---|---|---|
| 9--11--93 | ಮಂಗಳವಾರ | ---- | ಅಂಕುರಾರ್ಪಣೆ |
| 10--11--93 | ಬುಧವಾರ | ಧ್ವಜಾರೋಹಣ | ಚಿಕ್ಕ ಶೇಷವಾಹನ. |
| 11--11--93 | ಗುರುವಾರ | ಟಾಂಜಾನ್ ಉತ್ಸವ | ಹಂಸವಾಹನ. |
| 12--11--93 | ಶುಕ್ರವಾರ | ಮುತ್ತಿನ ಚಪ್ಪರವಾಹನ | ಸಿಂಹವಾಹನ. |
| 13--11--93 | ಶನಿವಾರ | ಕಲ್ಪವೃಕ್ಷವಾಹನ | ಹನುಮದ್ವಾಹನ. |
| 14--11--93 | ಭಾನುವಾರ | ಪಲ್ಲಕ್ಕಿ ಉತ್ಸವ :<br>ಸಂಜೆ -- ವಸಂತೋತ್ಸವ | ಗಜವಾಹನ. |
| 15--11--93 | ಸೋಮವಾರ | ಸರ್ವಭೂಪಾಲವಾಹನ | ಗರುಡೋತ್ಸವ. |
| 16--11--93 | ಮಂಗಳವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 17--11--93 | ಬುಧವಾರ | ರಥೋತ್ಸವ | ಅಶ್ವವಾಹನ. |
| 18--11--93 | ಗುರುವಾರ | ತೀರ್ಥವಾರಿ | ಧ್ವಜಾವರೋಹಣ. |

ಸೂಚನೆ: ತಿರುಚಾನೂರು ತಿರುಪತಿಯಿಂದ 6--8 ನಿಮಿಷದ ಹಾದಿ. ಒಂದರ ಹಿಂದೆ ಒಂದು ಬಸ್ ಉಂಟು. ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗುತ್ತವೆ. ವಿವರಗಳಿಗಾಗಿ ತಮ್ಮ ಬಳಿಯ ತಿ. ತಿ. ದೇ. ವಿಚಾರಣಾಕೇಂದ್ರದಲ್ಲಿ ವಿಚಾರಿಸಿ.

**ತಾವೂ ಬನ್ನಿ** **ತಿ. ತಿ. ದೇ.** **ತಮ್ಮವರನ್ನೂ ಕರೆತನ್ನಿ**



ಗೌರವ ಸಂಪಾದಕರು:
ಶ್ರೀ ಡಿ. ವಿ. ಎಲ್. ಎನ್. ಮೂರ್ತಿ, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.
ಸಂಪಾದಕ:
ಕೆ. ಸುಬ್ಬಾರಾವು,ಎಂ. ಎ.
ಉಪಸಂಪಾದಕ:
ಬಿ. ಎನ್. ಶ್ರೀನಿವಾಸನ್ ಎಂ. ಎ.,
ಮುದ್ರಣ:
ಎಂ. ವಿಜಯಕುಮಾರ್ ರೆಡ್ಡಿ
ಲೇಖನ ಜಾಹೀರಾತುಗಳಿಗೆ
ಮಿಕ್ಕವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ೨--೦೦**
**ವಾರ್ಷಿಕ ಚಂದಾ ೨೪--೦೦**



ಸಂಪುಟ - ೨೪ ] ಅಕ್ಟೋಬರ್ ೧೯೯೩ [ ಸಂಚಿಕೆ - ೫

# ವಿಷಯಸೂಚಿ



ರಕ್ಷಾಪತ್ರ ಚಿತ್ರಸೂಚಿ : ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ.

ನವರಾತ್ರಿ ಬ್ರಹ್ಮೋತ್ಸವದ ಚಿತ್ರಗಳು -- ವಿವಿಧ ವಾಹನಸೇವೆಗಳು

ಒಳಗಡೆ : 1. ಸ್ವಾಮಿ ವಿವೇಕಾನಂದ.

2. ತಿರುಮಲೆಯಲ್ಲಿ ನವರಾತ್ರಿ ಬ್ರಹ್ಮೋತ್ಸವ ಚಕ್ರಸ್ನಾನ.




ಸನಾತನ ಧರ್ಮದಲ್ಲಿ ಸನ್ಯಾಸಿಗಳ ಪರಂಪರೆ ಬಹುದೀರ್ಘವಾದದ್ದು. ಆಶ್ರಮಗಳಲ್ಲಿ ಒಂದು ಸನ್ಯಾಸವಾದದ್ದರಿಂದ ಸನ್ಯಾಸಿಗಳ ಸಂಖ್ಯೆಗೇನೂ ಕೊರತೆಯಿಲ್ಲ. ಪುರಾಣಕಾಲದ ಸಂತರ ಋಷಿಗಳ ಕಥೆಗಳನ್ನು ಪರಂಪರೆಯಿಂದ ಕೇಳುತ್ತ ಬಂದಿದ್ದೇವೆಯಾದರೂ, ಇತಿಹಾಸ ಕಾಲದಲ್ಲಿ ದಾಖಲೆಯಾದ ಸಂತ, ಸನ್ಯಾಸಿ, ಗಳ ಒಂದು ಕಾಲ ಕ್ರಮಬದ್ಧ ಚರಿತ್ರೆ ನಮಗೆ ಇನ್ನೂ ಪ್ರಾಪ್ತವಾಗಿಲ್ಲ. ಇವರ ಸಂಖ್ಯೆಯೂ ಕಡಮೆಯೇನಲ್ಲವಾದರೂ ಇವರನ್ನೆಲ್ಲ ಇಂದಿನ ಒಂದೊಂದು ಗುಂಪು, ವರ್ಗ, ಪಕ್ಷ, ಪಂಥದವರು ತಮ್ಮವರೆಂದು ಗುರುತಿಸಿಕೊಂಡು ನಡೆಯುವುದಾಗಿದೆ. ಆದರೆ ಇಡೀ ಸನಾತನ ಧರ್ಮಕ್ಕೆ ಆ ಮೂಲಕವಾಗಿ ಮಾನವೀಯ ಮೌಲ್ಯಗಳ ಪುನರುತ್ಥಾನಕ್ಕೆ ಆಯಾ ಸಂತರ ಕಾಣಿಕೆ ಕೊಡುಗೆ ಯೇನು ಎಂಬುದು ವ್ಯವಸ್ಥಿತವಾಗಿ ಶ್ರೇಣೀಕೃತ ಆಗಿಲ್ಲವೆನ್ನಬಹುದು.

ಇಂತಲ್ಲಿ ಸ್ವಾಮಿ ವಿವೇಕಾನಂದರು ಇದ್ದಾರೆ. ಕಾಲದಲ್ಲಿ ಒಂದು ಶತಮಾನದ ಹಿಂದಿನವರು. ಆದರೂ ಇಂದೂ ಪ್ರಸ್ತುತ ಆದವರು. ಅವರು ಚಿಕಾಗೋ ಸರ್ವಧರ್ಮ ಸಮ್ಮೇಳನದಲ್ಲಿ ಸನಾತನಧರ್ಮದ ಪ್ರತಿನಿಧಿಯಾಗಿ, ಹಿಂದೂ ದೇಶದ ಪ್ರತಿನಿಧಿಯಾಗಿ ತಮ್ಮ ಧಾರ್ಮಿಕ ದೃಷ್ಟಿ, ಜಾಗತಿಕ ಧೋರಣೆಗಳನ್ನು ವಿವರಿಸಿದ್ದು ನೂರುವರ್ಷದ ಹಿಂದೆ ಸೆಪ್ಟಂಬರ್ ತಿಂಗಳಲ್ಲಿ, ಹೈಂದವ ಧರ್ಮಕ್ಕೆ ಎಲ್ಲ ಮತಗಳೂ ಸಮಾನವೆಂದೂ, ಸಹಿಷ್ಣುತೆಯು ಸಹಜ ಸ್ವಭಾವವೆಂದೂ, ಭಾರತ ಬಹು ಮತಧರ್ಮಗಳ ಭವ್ಯ ಸಹಜೀವನದ ಸ್ಥಳವೆಂದೂ ಉದ್ಘೋಷಿಸಿದ ಅವರ ಪ್ರಾತಿನಿಧಿಕ ಭಾಷಣ ಇಂದೂ ಮನನೀಯವಾಗಿದೆ, ಉಪಾದೇಯವಾಗಿದೆ.

ವಂಗದೇಶದ ಒಂದು ಮೂಲೆಯಲ್ಲಿ ಹುಟ್ಟಿ, ದೇವರನ್ನು ತಾವು ನೋಡಿರುವಿರೊ ಎಂದು ದೇವತಾ ಪುರುಷನೊಬ್ಬನನ್ನು ಕೇಳುವ ದಾರ್ಷ್ಟ್ಯ ಹೊಂದಿದ ನರೇಂದ್ರ ಅವರನ್ನೇ ಗುರುವಾಗಿ ಸ್ವೀಕರಿಸಿ ವಿವೇಕಾನಂದರಾದರು. ಅಜ್ಞಾನವೇ ಅವಿವೇಕವೇ ಆನಂದವಾಗುವ ಸಾಮಾನ್ಯರ ನಡುವೆ ಧರ್ಮ ವಿವೇಕದಿಂದ ಆನಂದ ಪಡೆದರು. ಅಷ್ಟೇ ಅಲ್ಲ ಅದನ್ನು ಹಂಚಿಕೊಟ್ಟು, ಜೊತೆಯವರಿಗೂ ಆನಂದ ವುಂಟಾಗಿಸಲು, ಪರಿವ್ರಾಜಕರಾಗಿ ಪವಿತ್ರ ಭಾರತದ ಪೂರ್ವ ಪಶ್ಚಿಮ ದಕ್ಷಿಣೋತ್ತರ ಸುತ್ತಿದರು. ದಕ್ಷಿಣೇಶ್ವರದಿಂದ ದೀಪವನ್ನು ಹಿಡಿದು ನಡೆದು ದೇಶವಿದೇಶಗಳಲ್ಲಿಯೂ ಬೆಳಕು ಬೀರಿದರು.

ಇಂದು ಅವರನ್ನು ಎಲ್ಲರೂ ನಮ್ಮವರೆಂದು ಕರೆಯುತ್ತಿದ್ದಾರೆ. ಅಲ್ಲೂ ಪಾಂಥಿಕ, ಪಾಕ್ಷಿಕ, ಭಿನ್ನತೆಗಳು. ಅವುಗಳಿಂದ ಮೇಲೇರಿ ಬಿಡುಗಡೆಹೊಂದಿ, ವಿವೇಕಾನಂದರು ಇಡೀ ಭಾರತದ ಪ್ರತಿನಿಧಿಯಾಗಿ, ಇಡೀ ಭಾರತದ ಉದ್ಧಾರಕ್ಕಾಗಿ ದುಡಿದರು ಎಂಬುದು ಸ್ಪಷ್ಟವಾಗಿ ಜನಮನದಲ್ಲಿ ಮೂಡಬೇಕಾಗಿದೆ. ಅವರು ನೀಡಿದ ಆದರ್ಶವನ್ನು ಪಾಲಿಸಿ ಪುನರುದ್ಧಾರವಾಗಬೇಕಿದೆ. ಅದಕ್ಕಾಗಿ ನಡುಕಟ್ಟಿಸಿದ್ಧರಾಗಬೇಕು ಎನ್ನುವ ಅರಿವು ಮೂಡಿಸಿಕೊಳ್ಳುವುದು ನಾವು ಇಂದಾದರೂ ಮಾಡಲೇಬೇಕಾದ ಅಗತ್ಯವಾಗಿದೆ.

*"ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ನಿಬೋಧತ"*

* * * * *

# ನನ್ನ ಸೋದರ ಸೋದರಿಯರೆ...

"ನೀವು ನಮಗೆ ನೀಡಿದ ಉತ್ಸಾಹಯುತ ಆದರದ ಸ್ವಾಗತಕ್ಕೆ ಪ್ರತಿಕ್ರಿಯಿಸಲು ಹೊರಟಾಗ ಅನಿರ್ವಚನೀಯ ಆನಂದವೊಂದು ನನ್ನ ಹೃದಯವನ್ನು ತುಂಬುತ್ತದೆ. ಪ್ರಪಂಚದ ಅತ್ಯಂತ ಪ್ರಾಚೀನವಾದ ಸನ್ಯಾಸಿಗಳ ಸಂಘದ ಪರವಾಗಿ ನಾನು ನಿಮಗೆ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಬೌದ್ಧಧರ್ಮ ಜೈನಧರ್ಮಗಳೂ ಯಾವುದರ ಶಾಖೆಗಳು ಮಾತ್ರವೋ ಅಂತಹ ಸಕಲ ಧರ್ಮಗಳ ಮಾತೆಯ ಪರವಾಗಿ ನಾನು ನಿಮಗೆ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಮತ್ತು, ವಿವಿಧ ಜಾತಿ ಮತಗಳಿಗೆ ಸೇರಿದ ಕೋಟ್ಯನುಕೋಟಿ ಹಿಂದುಗಳ ಪರವಾಗಿ ನಾನು ನಿಮಗೆ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಅಲ್ಲದೆ, 'ಇಲ್ಲಿ ಕಂಡುಬರುವಂತಹ ಸಹಿಷ್ಣುತಾ ಭಾವವನ್ನು ದೂರದೂರದ ದೇಶಗಳಿಂದ ಬಂದಿರುವ ಈ ಪ್ರತಿನಿಧಿಗಳು ತಮ್ಮೊಂದಿಗೆ ಒಯ್ದು ಪ್ರಸಾರ ಮಾಡುತ್ತಾರೆ' ಎಂದು ಸಾರಿದ ಈ ವೇದಿಕೆಯ ಮೇಲಿನ ಕೆಲವು ಭಾಷಣಕಾರರಿಗೂ ತನ್ನ ಕೃತಜ್ಞತೆಗಳು ಸಲ್ಲುತ್ತವೆ.

ಜಗತ್ತಿಗೆ ಸಹಿಷ್ಣುತೆಯನ್ನೂ ಸರ್ವಧರ್ಮ ಸ್ವೀಕಾರ ಭಾವವನ್ನೂ ಬೋಧಿಸಿದ ಧರ್ಮಕ್ಕೆ ಸೇರಿದವನು ನಾನೆಂಬ ಹೆಮ್ಮೆ ನನ್ನದು. ನಾವು ಸರ್ವಮತ ಸಹಿಷ್ಣುತೆಯನ್ನು ಒಪ್ಪುತ್ತೇವಷ್ಟೇ ಅಲ್ಲದೆ, ಸಕಲ ಧರ್ಮಗಳೂ ಸತ್ಯವೆಂದು ನಾವು ನಂಬುತ್ತೇವೆ. ಯಾವ ಧರ್ಮದ ಪವಿತ್ರ ಭಾಷೆಗೆ 'ಎಕ್ಸ್‌ಕ್ಲೂಷನ್' (ಹೊರಗಿಡುವುದು, ಬಹಿಷ್ಕಾರ ಹಾಕುವುದು) ಎಂಬ ಪದವನ್ನು ಅನುವಾದಿಸಲು ಸಾಧ್ಯವೇ ಇಲ್ಲವೋ ಅಂತಹ ಧರ್ಮಕ್ಕೆ ಸೇರಿದ ಹೆಮ್ಮೆ ನನ್ನದು. (ಕರತಾಡನ) ಪ್ರಪಂಚದ ಎಲ್ಲ ಧರ್ಮಗಳ ಎಲ್ಲ ರಾಷ್ಟ್ರಗಳ ಸಂಕಟ ಪೀಡಿತ ನಿರಾಶ್ರಿತರಿಗೆ ಆಶ್ರಯವನ್ನಿತ್ತ ರಾಷ್ಟ್ರಕ್ಕೆ ಸೇರಿದವನೆಂಬ ಹೆಮ್ಮೆ ನನ್ನದು. ರೋಮನ್ನರ ದಬ್ಬಾಳಿಕೆಗೆ ಗುರಿಯಾಗಿ ತಮ್ಮ ಪವಿತ್ರ ದೇವಾಲಯವು ನುಚ್ಚು ನೂರಾದಾಗ ದಕ್ಷಿಣ ಭಾರತಕ್ಕೆ ವಲಸೆ ಬಂದ ಇಸ್ರೇಲೀಯರ ಒಂದು ಗುಂಪನ್ನು ನಮ್ಮ ಮಡಿಲಲ್ಲಿಟ್ಟುಕೊಂಡು ಆಶ್ರಯ ನೀಡಿದ್ದೇವೆ ಎಂದು ಹೇಳಲು ನನಗೆ ಹೆಮ್ಮೆ. ಘನ ಜರತುಷ್ಟ್ರ ಜನಾಂಗದ ಅವಶೇಷಕ್ಕೆ ಆಶ್ರಯವಿತ್ತ ಹಾಗೂ ಈಗಲೂ ಪೋಷಿಸುತ್ತಿರುವ ಧರ್ಮಕ್ಕೆ ನಾನು ಸೇರಿದವನೆಂಬುದು ನನ್ನ ಹೆಮ್ಮೆ

ಸೋದರರೇ, ನಾನು ಬಾಲ್ಯಾರಭ್ಯದಿಂದ ಪಠಿಸುತ್ತಿದ್ದ, ಮತ್ತು ಈಗಲೂ ಲಕ್ಷಾಂತರ ಹಿಂದೂಗಳು ಪಠಿಸುವ ಶ್ಲೋಕವೊಂದರಿಂದ ಕೆಲ ಸಾಲುಗಳನ್ನು ನಿಮಗೆ ಉದ್ಧರಿಸಿ ಹೇಳುತ್ತೇನೆ --

ತ್ರಯೀ ಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ
ಪ್ರಭಿನ್ನೇ ಪ್ರಸ್ಥಾನೇ ಪರಮಿದಮದಃ ಪಥ್ಯಮಿತಿ ಚ
ರುಚೀನಾಂ ವೈಚಿತ್ರ್ಯಾತ್ ಋಜು ಕುಟಿಲ ನಾನಾ ಪಥ ಜುಷಾಂ
ನೃಣಾಮೇಕೋ ಗಮ್ಯಃ ತ್ವಮಸಿ ಪಯಸಾಂ ಅರ್ಣವ ಇವ

ಎಂದರೆ, ಭಿನ್ನ ಭಿನ್ನ ಸ್ಥಾನಗಳಿಂದುದಿಸಿದ ನದಿಗಳೆಲ್ಲ ಹರಿಯುತ್ತ ಹೋಗಿ ಕೊನೆಗೆ ಸಾಗರದೊಳಗೊಂದಾಗುವಂತೆ, ಹೇ ಪ್ರಭು, ಮಾನವರು ತಮ್ಮ ತಮ್ಮ ಅಭಿರುಚಿ ವೈಚಿತ್ರ್ಯಗಳಿಂದ ಅನುಸರಿಸುವ ಅಂಕುಡೊಂಕಿನ ಬೇರೆ ಬೇರೆ ದಾರಿಗಳೆಲ್ಲ ಕೊನೆಗೆ ನಿನ್ನನ್ನೇ ಬಂದು ಸೇರುತ್ತವೆ.

ಜಗತ್ತಿನಲ್ಲಿ ಇಲ್ಲಿಯವರೆಗೆ ನಡೆಸಲ್ಪಟ್ಟ ಮಹಾದ್ಭುತ ಸಮ್ಮೇಳನಗಳಲ್ಲೊಂದಾದ ಇಂದಿನ ಈ ಸಭೆಯು, ಭಗವದ್ಗೀತೆಯು ಬೋಧಿಸಿರುವ ಆ ಅದ್ಭುತ ತತ್ವಕ್ಕೆ ಸಾಕ್ಷಿಯಾಗಿದೆ, ಮತ್ತು ಅದನ್ನೇ ಸಾರುತ್ತದೆ--

ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ

"ಯಾರು ಯಾರು ನನ್ನಲ್ಲಿಗೆ ಯಾವಯಾವ ಮಾರ್ಗದಿಂದ ಬರುತ್ತಾರೋ ಅವರವರನ್ನು ನಾನು ಅದದೇ ಮಾರ್ಗದಿಂದ ತಲಪುತ್ತೇನೆ. ಮಾನವರು ಅನುಸರಿಸುವ ಮಾರ್ಗಗಳೆಲ್ಲ ಕೊನೆ



ಕನ್ನಡಾನುವಾದ :
ಸ್ವಾಮಿ ಪುರುಷೋತ್ತಮಾನಂದ
ಕೃಪೆ -- ತರಂಗ -- 19--9--93


ಲಂಡನ್‌ನಲ್ಲಿ — 1896ರಲ್ಲಿ.

ಯಲ್ಲಿ ನನ್ನನ್ನೇ ಬಂದು ಸೇರುತ್ತವೆ" ಗುಂಪುಗಾರಿಕೆ, ಅತಿಯಾದ ಮತಾಭಿಮಾನ ಹಾಗೂ ಅ ಘೋರ ಪರಿಣಾಮವಾದ ಧರ್ಮಾಂಧತೆಗಳು ಬಹುಕಾಲದಿಂದ ಈ ಸುಂದರ ಪೃಥ್ವಿಯ ಆಕ್ರಮಿಸಿಕೊಂಡಿವೆ. ಅವು ಭೂಮಿಯನ್ನು ಹಿಂಸೆಯಿಂದ ತುಂಬಿ, ಮತ್ತೆ ಮತ್ತೆ ಮಾನವನ ದಿಂದ ತೋಯಿಸಿವೆ; ನಾಗರಿಕತೆಯನ್ನು ನಾಶಮಾಡಿವೆ, ದೇಶದೇಶಗಳನ್ನೇ ನಿರಾಶೆಯ ಕೂ ತಳ್ಳಿವೆ. ಆ ಘೋರ ರಾಕ್ಷಸತನವಿಲ್ಲದಿದ್ದಲ್ಲಿ ಮಾನವನ ಸಮಾಜವು ಈಗಿರುವುದಕ್ಕಿಂತ ಎಷ್ಟೋ ಹೆಚ್ಚು ಮುಂದುವರಿಯುತ್ತಿತ್ತು. ಆದರೆ ಈಗ ಆ ರಾಕ್ಷಸತನದ ಅಂತ್ಯಕಾಲ ಸಮಿ ಸಿದೆ. ಈ ಸಮ್ಮೇಳನದ ಪ್ರತಿನಿಧಿಗಳ ಗೌರವಾರ್ಥವಾಗಿ ಇಂದು ಬೆಳಗ್ಗೆ ಮೊಳಗಿದ ಘಂಟನಾದ ಎಲ್ಲ ಮತಾಂಧತೆಗೆ ಮೃತ್ಯುಘಾತವನ್ನೀಯುವುದೆಂದು ಆಶಿಸುತ್ತೇನೆ. (ಕರತಾಡನ) ಮತ್ತು ಅ ಖಡ್ಗ--ಲೇಖನಿಗಳ ಮೂಲಕ ಸಂಭವಿಸುವ ಹಿಂಸಾದ್ವೇಷಗಳಿಗೆ, ಹಾಗೂ ಒಂದೇ ಗುರಿಯೆ ಸಾಗುತ್ತಿರುವ ಪಥಿಕರೊಳಗಿನ ಅಸಹನೆ -- ಮನಸ್ತಾಪಗಳಿಗೆ ಮೃತ್ಯುಘಾತವನ್ನೀಯುವುದೆಂ ಹೃತ್ಪೂರ್ವಕವಾಗಿ ಆಶಿಸುತ್ತೇನೆ."

ಸ್ವಾಮಿ ವಿವೇಕಾನಂ

ಚಿಕಾಗೋ, 11--9--189





# ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ಶಿಲಾವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು. ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗ ಳಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾದಾಯ ಇಲಾಖಾಧಿಕಾರಿಗಳಿಂದ ಪ್ರಮಾಣಪತ್ರವನ್ನು ಕಳುಹಿಸಬೇಕು.

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ಶಿಲಾ, ಪಂಚಲೋಹ, ವಿಗ್ರಹಗಳನ್ನೂ 50 ಶತಾಂಶ ರಿಯಾಯಿತಿ ದರಗಳಲ್ಲಿ ಒದಗಿಸಲಾಗುವುದು. ಇದಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯ ವರಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು. ಹಣದ ಸಂದಾಯವಾದ ನಂತರವೇ ವಿಗ್ರಹಗಳ ತಯಾರಿಕೆಯ ಕೆಲಸವನ್ನು ಕೈಗೆತ್ತಿಕೊಳ್ಳಲಾಗುವುದು.

ತಿರುಪತಿಯಿಂದ ವಿಗ್ರಹಗಳನ್ನು ಪಡೆದು ತಮ್ಮ ಸ್ಥಳಗಳಿಗೆ ಸಾಗಿಸುವ ಹೊಣೆ ಆಯಾ ಅಭ್ಯರ್ಥಿಗಳಿಗೇ ಸೇರಿದ್ದು.

ಕಾಲದಿಂದ ಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗ ಳನ್ನು ಸರಬರಾಜು ಮಾಡಲಾಗುವುದು.

*ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ--*

***ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ--517 501.***

# ಕೃಷ್ಣಾವತಾರ

---ಡಾ|| ವಿ. ಎಸ್. ಸಂಪತ್ಕುಮಾರಾಚಾರ್ಯ.

ಅಗ್ರೇ ಪಶ್ಯಾಮಿ ತೇಜೋ
ನಿಬಿಡತರಕಲಾಯಾವಲೀ ಲೋಭನೀಯಂ
ಪೀಯೂಷಾಪ್ಲಾವಿತೋಹಂ ತದನು
ತದುದರೇ ದಿವ್ಯ ಕೈಶೋರವೇಷಂ
ತಾರುಣ್ಯಾರಂಭರಮ್ಯಂ ಪರಮಸುಖ
ರಸಾಸ್ವಾದ ರೋಮಾಂಚಿತಾಂಗೈಃ
ಆವೀತಂ ನಾರದಾದ್ಯೈರ್ವಿಲಸತ್
ಉಪನಿಷತ್ಸುಂದರೀ ಮಂಡಲೈಶ್ಚ
(ನಾರಾಯಣೀಯಮ್ --೧೦೦೨)

ನಿಬಿಡತರವಾದ ಕಳಾಯ ಪುಷ್ಪಗುಚ್ಛಗಳಿಂದ ತುಂಬಿದ ಹಾರದಂತೆ ಕಂಗೊಳಿಸುತ್ತಿರುವ ಪ್ರಭಾ ಮಂಡಲವನ್ನು ನಾನು ಮುಂದೆ ಕಾಣುತ್ತಿರುವೆ. ಹೀಗಾಗಿ ನಾನು ಪರಮಾನಂದ ಸಾಗರದಲ್ಲಿ ನಿಮಗ್ನನಾಗಿರುವೆ ಮತ್ತು ಅದರೊಳಗೆ ಆಗತಾನೇ ತಾರುಣ್ಯಕ್ಕೆ ಕಾಲಿಟ್ಟಿರುವ ರಮ್ಯವಾದ ಪರಮ ರಸಾಸ್ವಾದದಿಂದ ರೋಮಾಂಚಿತರಾದ ನಾರದಾದಿಗಳಿಂದ ಆವರಿಸಲ್ಪಟ್ಟು, ಉಪನಿಷತ್ತುಗಳೆಂಬ ಸುಂದರಿಯರ ಮಂಡಲದಿಂದ ಸಮಾವೃತವಾದ ಕಿಶೋರವೇಷದಿಂದ ಕಂಗೊಳಿಸುತ್ತಿರುವ ಬಾಲನನ್ನು ನಾನು ಕಾಣುತ್ತಿರುವೆನು .

"ಅರೈಪ್ಪನ್ ತಿರುಮಾಲ್ಕೈ
ಅಂಗುಂ ಅವರ್‌ಹಳ್‌ಶೊನ್ನ
ಪಿರೈಪ್ಪಣಿಲ್ ಪೆರುಂ
ಪೆಯರೇ ಪೇಶಿ -- ಇರಿಪ್ಪ ಅರಿಯ
ಆಯವನೇ ಯಾದವನೇ ಎನ್ರು
ಅವನೈಯಾರ್ ಮುಹಪ್ಪಂ
ಮಾಯವನೇ ಎನ್ರುಮದಿತ್ತು"
(ಪೂದತ್ತಾಳ್ವಾರ್)

"ತಿಳಿಯುವುದಕ್ಕೆ ಅಸಾಧ್ಯವಾದ ಸ್ವರೂಪವುಳ್ಳ, ಅಪರಿಚ್ಛಿನ್ನ ಸ್ವರೂಪನಾದ ಗೋಪಾಲನೇ ಯದು ಕುಲದಲ್ಲಿ ಅವತರಿಸಿರುವವನೇ ಎಂದೂ, ಆಶ್ಚರ್ಯ ಗುಣ ಚೇಷ್ಟಿತನೇ ಎಂದೂ ಅನುಸಂಧಾನಮಾಡಿ, ಆ ನಂದ ಗೋಕುಲದಲ್ಲಿದ್ದ ಆ ಸ್ತ್ರೀಯರು ಹೇಳಿದ ದೋಷವಿನಿತೂ ಇಲ್ಲದ, ಶ್ರೇಷ್ಠವಾದ ಶ್ರೀನಾಮವನ್ನು ಹೇಳಿ, ಶ್ರಿಯಃಪತಿಯಾದ ಆ ಸರ್ವೇಶ್ವರನನ್ನು ಎಲ್ಲರ ಎದುರಿಗೂ ಕರೆಯುತ್ತೇನೆ"

ಓಂ ತತ್ಸತ್ ಪದಸೂಚ್ಯಾಯ
ವಿಷ್ಣವೇ ಪರಮಾತ್ಮನೇ
ಜಗಜ್ಜೀವೇಶ ತತ್ವಾಯ
ಶ್ರೀಕೃಷ್ಣಬ್ರಹ್ಮಣೇ ನಮಃ (ಡಿ.ವಿ.ಜಿ.)

ಶ್ರೀಕೃಷ್ಣನನ್ನು ಈ ಭಾರತದೇಶದಲ್ಲಿ ಲಕ್ಷೋಪಲಕ್ಷ ಮಂದಿ ಶ್ರದ್ಧಾಭಕ್ತಿಗಳಿಂದ ಸಾವಿರಾರು ವರ್ಷಗಳಿಂದ ಭಗವನ್ಮೂರ್ತಿಯೆಂದು ನಂಬಿ ಪೂಜಿಸುತ್ತ ಬಂದಿದ್ದಾರೆ. ಕೃಷ್ಣ ಎಂದರೆ ಸೆಳೆಯುವವನು, ಉಜ್ಜುವವನು, ತೊಳೆಯುವವನು, ನಿದ್ದೆಯಿಂದೆಬ್ಬಿಸುವವನು ಎಂದರ್ಥ. ಇದು ಪರಮಾತ್ಮನ ಅಂತರ್ಯಾಮಿ ಭಾವ, ಶ್ರೀರಾಮನು ಹೆಚ್ಚುಪೂಜ್ಯನಾದರೆ ಶ್ರೀಕೃಷ್ಣನು ಹೆಚ್ಚುಪ್ರಿಯನು. ಶ್ರೀರಾಮನು ತ್ರೇತಾ ಯುಗದವನು. ಶ್ರೀಕೃಷ್ಣನು ದ್ವಾಪರಯುಗದವನು.

ಶ್ರಾವಣ ಮಾಸ ಕೃಷ್ಣಪಕ್ಷದ ಅಷ್ಟಮಿದಿವಸ ಮಧ್ಯರಾತ್ರಿಯಲ್ಲಿ ರೋಹಿಣಿ ನಕ್ಷತ್ರವಿರುವಾಗ ಶಂಖಚಕ್ರಗದಾಧಾರಿಯಾಗಿ, ಪೀತಾಂಬರವನ್ನುಟ್ಟವನಾಗಿ, ಭುಜಕೀರ್ತಿಗಳನ್ನು ತೊಟ್ಟವನಾಗಿ, ಗದಾಪದ್ಮಧಾರಿಯಾಗಿ, ತಲೆಯಮೇಲೆ ಕಿರೀಟ, ಹಣೆಯಲ್ಲಿ ತಿಲಕ, ಕೊರಳಲ್ಲಿ ಕೌಸ್ತುಭಮಣಿ, ಕರ್ಣಕುಂಡಲ ಕಿವಿಗಳಲ್ಲಿ ಇಟ್ಟುಕೊಂಡವನಾಗಿ, ಶ್ರೀಹರಿಯು ದೇದೀಪ್ಯಮಾನವಾಗಿ ದೇವಕೀ ವಸುದೇವರಿಗೆ ಸಂದರ್ಶನವಿತ್ತು, ಅವರ ಸ್ತುತಿಯಿಂದ ತೃಪ್ತನಾಗಿ, ಅವನು ಶಿಶುವಾಗಿ, ತನ್ನನ್ನು ಗೋಕುಲದಲ್ಲಿ ಇರಿಸಲು ಹೇಳಿದನು. ವಸುದೇವನು ಅಂತೆಯೇ ನಿರಾತಂಕವಾಗಿ ಗೋಕುಲವನ್ನು ಸೇರಿ, ಅಲ್ಲಿ ಯಶೋದೆಯ ಹಾಸಿಗೆಯ ಮೇಲಿನ ಪುತ್ರಿಯನ್ನು ತೆಗೆದುಕೊಂಡು ತನ್ನ ಕೂಸನ್ನು ಅವಳ ಹಾಸಿಗೆಯ ಮೇಲೆ ಮಲಗಿಸಿ, ಮಧುರೆಗೆ ಹೊರಟು ಬೇಗನೆ ಕಾರಾಗೃಹವನ್ನು ಸೇರಿದನು. ಬಾಗಿಲುಗಳು ಮುಚ್ಚಿಕೊಂಡವು. ಸಂಕೋಲೆಗಳು ವಸುದೇವನನ್ನು ದುರ್ಗೆಯ ಮಾಯೆಯಿಂದ ಪುನಃ ಬಂಧಿಸಿದುವು. ಹೀಗೆ ಕೃಷ್ಣನು ಒಬ್ಬಳ ಮಗನಾಗಿ ಹುಟ್ಟಿ ಇನ್ನೊಬ್ಬಳ ಮಗನಾಗಿ ಗೋಕುಲದಲ್ಲಿ ಬೆಳೆದನು (ಒರುತ್ತಿ ಮಗನಾಯ್ ಪಿರಂದು ಒರುತ್ತಿ ಮಗನಾಯ್ ವಳರ-- ತಿರುಪ್ಪಾವೈ).

ಯಾದವರ ಪುರೋಹಿತರಾದ ಗರ್ಗಾಚಾರ್ಯರು ವಸುದೇವನ ಪ್ರಾರ್ಥನೆಯಂತೆ ನಾಮಕರಣ ಮಾಡಿಸಲು ಬಂದು ರೋಹಿಣೀದೇವಿಯ ಕುಮಾರನು ಬೆಳ್ಳಗೆ ಹಾಗೂ ಅಧಿಕ ಬಲಿಷ್ಠನಿದ್ದುದರಿಂದ ಅವನಿಗೆ ಬಲರಾಮನೆಂದೂ, ಯಶೋದೆಯ ಕಂದನು ಕಪ್ಪು ಬಣ್ಣದವನಾಗಿದ್ದುದರಿಂದ ಕೃಷ್ಣನೆಂದು ನಾಮಕರಣ ಮಾಡಿ ಇವನು ನಾರಾಯಣನೆಂದು ತಿಳಿಯಬೇಕೆಂದು ನಂದಗೋಪನಿಗೆ ಹೇಳಿ ತಮ್ಮ ಆಶ್ರಮಕ್ಕೆ ಹೋದರು. ಕೃಷ್ಣನು ಕಿರಿಯವನಾದ್ದರಿಂದ ಅವನ ಹಿರಿಯನಾದ ಬಲರಾಮನು ವಿಷ್ಣುವನ್ನು ಸದಾಸೇವಿಸುತ್ತಿರುವ ಆದಿಶೇಷನು. ಆದ್ದರಿಂದ ಕಿರಿಯನಾದ ಕೃಷ್ಣನು ಹಿರಿಯನಾದ ಬಲರಾಮನಿಗೆ ವಿಧೇಯನಾಗಿರಬೇಕೆಂಬುದು ರಾಮಾವತಾರದಲ್ಲಿ ತೋರಿಬಂದ ಧರ್ಮನಡತೆ. ಆದರೆ ಅನುಭವದಲ್ಲಿ ಕೃಷ್ಣನ ಹಾವಳಿ ಸಾರ್ವತ್ರಿಕವಾಗಿದ್ದುಕೊಂಡು, ಬಲರಾಮನಿಗೆ ಅಗ್ರಜತ್ವಕ್ಕೆ ದೊರಕಬೇಕಾದ ಮನ್ನಣೆ ಸಲ್ಲಲಿಲ್ಲ. ರಾಮಾಯಣದ ತತ್ವವಾದ ವೃದ್ಧಸೇವೆ ತಲೆ ಕೆಳಕಾಯಿತು. ಇದಕ್ಕೆ ಕಾರಣ ತತ್ವಾನುಗುಣವಾದ ನಡತೆಯಲ್ಲಿ ವೃದ್ಧಸೇವೆ ವಿನಾಶಕರ. ಇದಕ್ಕೆಮತ್ತೊಂದು ಕಾರಣ ವೃದ್ಧತ್ವದ ಪರಿಪಾಲನೆ ಮಾಡದೆ ಸ್ವೇಚ್ಛೆಯನ್ನೂ ಬೆರೆಸಿಕೊಂಡ ಒಂದು ದೋಷ. ಅದನ್ನು ಬಲರಾಮನಲ್ಲಿ ವ್ಯಕ್ತವಾಗಿ ಕಾಣಬಹುದು. ಬಲರಾಮನು ಅಗ್ರಜನಾದರೂ ಅಗ್ರತ್ವವನ್ನು ಕಾಪಾಡಿಕೊಳ್ಳಲಿಲ್ಲ. ಇದಕ್ಕೆ ವೃದ್ಧತ್ವವು ಶುದ್ಧವಾಗಿರಬೇಕು. ಅಂದರೆ ದುಃಶೀಲರ ಸಹಿಷ್ಣುತೆ ಧರ್ಮಸಾಂಕರ್ಯವಾದುದರಿಂದ ಆವೃತ್ತಿಯಲ್ಲಿ ತೊಡಗುವವರು ವೃದ್ಧರಾಗಲಾರರು. ಈ ತತ್ವವನ್ನು ಶ್ರೀಕೃಷ್ಣಾವತಾರದಲ್ಲಿ ಅಣ್ಣ ತಮ್ಮಂದಿರಲ್ಲಿ ಕಾಣಬಹುದು. ಪ್ರಮಾಣದಲ್ಲಿ ತೋರಿ ಬಂದ ವೃದ್ಧವಿಧೇಯತೆ ಕೇವಲ ಜನ್ಮವಲ್ಲ..



ಆದರೆ ಧರ್ಮನಿಬದ್ಧವಾಮುದು. ಅದನ್ನು ತೋರಿಸಲು ರಾಮ, ಕೃಷ್ಣರ ಅವತಾರ.

ಪ್ರಸ್ತುತಃ ಕೃಷ್ಣನೇ ಅವತಾರಪುರುಷ. ಆದರೆ ಬಲರಾಮನು ಅಗ್ರಜನಾಮುದರಿಂದ, ಕೃಷ್ಣನೂ ಗೌರವಿಸದೇಕಾದ ವ್ಯಕ್ತಿಯಾಮುದರಿಂದ, ಅವನನ್ನು ಈ ಸಂದರ್ಭದಲ್ಲಿ ಅವತಾರವೆಂದು ಪರಿಗಣಿಸಲಾಗಿದೆ. ಮಹಾಭಾರತದಲ್ಲಿ ಮತ್ತು ಮುಖ್ಯವಾಗಿ ಭಾಗವತದಲ್ಲಿ ಕೃಷ್ಣನ ನಡತೆ ಆಪಾತತಃ ಸಾಮಾನ್ಯವಾದ ಧರ್ಮ ದೃಷ್ಟಿಯಲ್ಲಿ ಸ್ವೇಚ್ಛಾವರ್ತನೆಯಾಗಿ ಕಂಡು ಬರುತ್ತವೆ. ಇದರ ಅಂತರ್ಭಾವ ಅವನ ವರ್ತನೆಯೆಲ್ಲಾ ಪರಮಾತ್ಮನ ವರ್ತನೆಯಾಮುದರಿಂದ, ದೋಷ ವಿಲ್ಲದಿರುವುದರಿಂದ, ಮಾನುಷ ದೃಷ್ಟಿಯಲ್ಲಿ ದೋಷವಾಗಿ ಕಂಡುಬಂದರೂ, 'ಸರ್ವಗುಣಾಯಗುಣೆನಾಂ' ಎಂಬಂತೆ ದೋಷವು ವಿಶಾಲ ದೃಷ್ಟಿಯಲ್ಲಿ ಗುಣಕ್ಕೆ ಪರಭಾಗವಾಗಿರುವುದರಿಂದ, ಅವನ್ನು ಗುಣವನ್ನಾಗಿ ಕಾಣಬೇಕು. ಗುಣದ ಗುಣತ್ವವನ್ನು ಸಾರುವುದೇ ದೋಷದ ಕೃತ್ಯ. ಆದ್ದರಿಂದ ದೋಷವನ್ನು ಗುಣಪ್ರಕಾಶಕ್ಕೆ ಆಶ್ರಯವೆಂದು ಬಗೆಯಲಾಗಿದೆ. ಇದೇ ಬಲರಾಮನಿಗೂ, ಕೃಷ್ಣನಿಗೂ ಉಳ್ಳ ವೈಲಕ್ಷಣ್ಯ. ಸಾಮಾನ್ಯವಾಗಿ ನೋಡಿದರೆ ಅಗ್ರಜನಲ್ಲಿ ಅವಿಧೇಯತೆ ದೋಷವಾಗುತ್ತದೆ. ಈ ದೋಷದಲ್ಲಿ ಪಳಗಿದವನು ಕೃಷ್ಣ. ಅಗ್ರಜನಾದವನು ಅಸಭ್ಯ ಸಹವಾಸದಿಂದ ಧರ್ಮದ ಕೈಯಲ್ಲಿ ನಾಶಕ್ಕೆ ತುತ್ತಾಗುತ್ತಾನೆ ಎಬ ಮರ್ಮವನ್ನು ಪ್ರಕಾಶ ಪಡಿಸಲು, ಬಲರಾಮನು ಅಗ್ರಜನಾದರೂ ಅನರ್ಹರ ಜೊತೆ ಸೇರಿ ಅವರ ವಧೆಗೆ ಪರೋಕ್ಷವಾಗಿ ಸಹಾಯನೀಡುತ್ತಾನೆ. ಆಂಜನೇಯ ಮತ್ತು ಸುಗ್ರೀವ ರಾಮನಿಗೆ ಪ್ರತ್ಯಕ್ಷವಾಗಿ ಸಹಾಯನೀಡಿದರು. ಬಲರಾಮನು ಪರೋಕ್ಷವಾಗಿ ನೀಡಿದನು. ಈ ದೃಷ್ಟಿಯಿಂದ ಅಗ್ರಜನಾದರೂ ಅವನು ಆಪಾತತಃ ಕೃಷ್ಣನನ್ನು ವಶದಲ್ಲಿಟ್ಟುಕೊಳ್ಳಲು ಸಮರ್ಥನಾಗಲಿಲ್ಲ. ಕೃಷ್ಣನ ಅಧರ್ಮವು ಧರ್ಮಕ್ಕಿಂತ ಅಂದರೆ ಲೌಕಿಕ ಧರ್ಮಕ್ಕಿಂತ ವೈದಿಕಧರ್ಮ, ಮಿಗಿಲಾಗಿ ಪರಿಪಾಲನೀಯ. ಸಾಮಾನ್ಯವಾಗಿ ಕೃಷ್ಣನ ನೋಟ, ನಡತೆಗಳನ್ನು ವಿಮರ್ಶಿಸಿದರೆ ಅಕೃತ್ಯಕರಣದಲ್ಲಿ ಸರ್ವೇಶ್ವರನಾಗಿ ಉಳಿಯುತ್ತಾನೆ. ಸುಳ್ಳು, ಕಳ್ಳತನ, ಮೋಸ, ವ್ಯಭಿಚಾರ ಈ ನಾಲ್ಕು ಸಮಾಜದಲ್ಲಿ ಅತಿಹೇಯವಾದ ನಡವಳಿಕೆ. ಆದರೆ ಕೃಷ್ಣನು ತಾನು ಸತ್ಯಸಂಧನೆಂದು ಹೇಳಿಕೊಳ್ಳುತ್ತಾನೆ. ಅವರಲ್ಲಿ ಕೊಟ್ಟಮಾತಿಗೆ ಎಳ್ಳಷ್ಟೂ ತಪ್ಪುವುದಿಲ್ಲ. ಅವನು ಅನಾದಿ ಬ್ರಹ್ಮಚಾರಿ. ಅಂದರೆ ಸ್ವಾರ್ಥತೆ ಎಂಬುದು ಪೂರ್ಣವಾಗಿ ಸನ್ನಸ್ತವಾಗಿದೆ.

ಶ್ರೀಕೃಷ್ಣಾವತಾರದಲ್ಲಿ ಸಾಮಾಜಿಕ ವ್ಯಕ
ತೋರಿಬಂದುದು. ಒಂದೇ ಮನೆತನದಲ್ಲಿ ಒ
ನಲ್ಲಿ ಇರದೇಕಾದವರು ಬಿಕ್ಕಟ್ಟಿಗೆ ಸಿಕ್ಕಿ ಸಮಾಜ
ಮುರಿದು ಪರಸ್ಪರ ವಿನಾಶ ಕೃತ್ಯ ದಲ್ಲಿ ತೊ
ದರು. ಸಮಾಜನಾಶಕ ಕೃತ್ಯದ ಕೌರವವಂಶ
ಹಿರಿಯ ನಾದವನು ಕುರುಡ, ಜ್ಞಾನಶೂನ್ಯ ಪು
ಮಿಯಾದ ಧೃತರಾಷ್ಟ್ರ. ಅಂದರೆ ಅಧಾರ್ಮಿಕ
ದುರ್ಯೋಧನನ ಪೋಷಕ. ದೋಷವನ್ನು
ನಮಾಡದೆ, ಮಗನೆಂಬ ವ್ಯಕ್ತಿಪ್ರೇಮದಲ್ಲಿ ಧ
ವನ್ನು ಮುಂದುವರಿಸಲಾಗದೆ ವಂಶನಾಶಕ್ಕೆ
ಣನಾದನು. ಅಷ್ಟೇ ಅಲ್ಲದೆ ಸಮಿಪದ ಸ
ಧಿಯಾದ ಶಕುನಿಯನ್ನು ತನ್ನ ಪರವಾಗಿ
ನಿಗೆ ಮಾರ್ಗದರ್ಶಕನನ್ನಾಗಿ ಏರ್ಪಡಿಸಿದ. ಅ
ನಾದ ತಂದೆ, ಅವಿವೇಕಿಯಾದ ಸೋದರಮ
ದುರ್ಮಾರ್ಗ ಪ್ರವರ್ತಕ. ವಸ್ತುತಃ ಮನೆಹಾಳ.
ರವಶಕ್ಕೆ ಸಿಕ್ಕಿ ದುರ್ಯೋಧನನು ಸಮಾಜದಲ್ಲಿ
ಹರ್ತೆಯನ್ನು ಪ್ರದರ್ಶಿಸುವ ವ್ಯಕ್ತಿಯಾಗಿ ಉ
ಕೊಂಡನು. ಅವನಿಗೆ ಮಿತ್ರನಾಗಿ ಬಲರಾವ
ಸೇರಿಕೊಂಡ. ಆದರೆ ಅವನನ್ನು ತಿದ್ದಲಿಲ್ಲ. ಬ
ಮನು ಅಣ್ಣನಾದುದರಿಂದ ತಮ್ಮನನ್ನು ವಿಧ
ತೆಯಲ್ಲಿಟ್ಟುಕೊಳ್ಳಲು ಬಯಸಿದನು. ಆದರೆ
ಯನೆಂಬ ಕಾರಣದಿಂದಲೇ ಗೌರವ ದೊರ
ನಡತೆ, ಧರ್ಮದೃಷ್ಟಿ ಅಧರ್ಮಪೋಷಣೆಗೆ ಅ
ವಿರುದ್ಧ. ತತ್ಕಾರಣ ಅಗ್ರಜನನ್ನು ಲಕ್ಷಿಸದೆ ನಿಜ
ಧರ್ಮಪಾಲನೆಯಲ್ಲಿ ಕೃಷ್ಣನು ತೊಡಗಿದನು.

ರಾಮಾಯಣದ ತತ್ವವೂ ಇಲ್ಲಿಯೂ ಪಾ
ವಾಗಿದೆ. ಅಲ್ಲಿ ಲಕ್ಷ್ಮಣನ ಬಾಯಲ್ಲಿ ಈ ತತ್ವ
ವನ್ನು ಕಾಣಬಹುದು.

"ಅಹಂ ತಾವತ್ ಮಹಾರಾಜೇ
ಪಿತೃತ್ವಂ ನೋಪಲಕ್ಷಯೇ
ಭ್ರಾತಾ ಭರ್ತಾ ಚ ಬಂಧುಶ್ಚ
ಪಿತಾಚ ಮಮ ರಾಘವಃ"

ಈ ಸಂದರ್ಭ -- ಕಾಡಿನಲ್ಲಿ ಸೀತಾರಾಮ
ಣರಿದ್ದಾಗ ದಶರಥನ ಮರಣದ ಸುದ್ದಿ ಬಂದಿ
ರಾಮನು ಲಕ್ಷ್ಮಣನನ್ನು 'ಲಕ್ಷ್ಮಣಾ, ನಮ್ಮಿಬ್ಬರ ತ
ತೀರಿಕೊಂಡರು' ಎಂದನು. ಅದಕ್ಕೆ ಲಕ್ಷ್ಮ
'ಸ್ವಾಮಿ, ನಿಮ್ಮ ತಂದೆ ತೀರಿಕೊಂಡರು. ನ
ಅವರು ಮಹಾರಾಜ. ನಾನು ತಂದೆಯಿಲ್ಲದವ
ತಾವೇ ನನಗೆ ಸರ್ವವಿಧ ಬಂಧು' ಎನ್ನುತ
ಇದಕ್ಕೆ ಕಾರಣ ಅನುಚಿತವಾದ ಕಾಮಕಲು
ಧರ್ಮಾಚರಣೆ. ಅಧರ್ಮ ಪರಿಪಾಲನೆ. ತ
ರಣ ದಶರಥನ ಧರ್ಮ, ಲಕ್ಷ್ಮಣನ ದೃಷ್ಟಿಯ

ಅಧರ್ಮವಾದುದರಿಂದ ಅಧಾರ್ಮಿಕ ಪಿತನನ್ನು ಮರೆತು ಧಾರ್ಮಿಕೋತ್ತಮನಾದ ಅಗ್ರಜನನ್ನು ತಂದೆಯನ್ನಾಗಿ ಭಾವಿಸಿದನು. ಇದೇರೀತಿ ಬಲರಾಮನ ಧರ್ಮವು ಮಿಶ್ರಧರ್ಮವಾದುದರಿಂದ ಅವನಿಗೆ ಅವಿಧೇಯನೆಂಬ ಭಾವನೆ ಯನ್ನು ತೋರಿಸದೆ ತಪ್ಪಿಸಿಕೊಂಡು, ಅಗ್ರಜನಿಂದ ರಕ್ಷಿತವಾಗಿ ಧರ್ಮ ಪರಿಪಾಲನೆ ಮಾಡಿದನು ಕೃಷ್ಣ.

ನಮ್ಮ ದೃಷ್ಟಿಯಲ್ಲಿ ರಾಸಕ್ರೀಡೆ ವ್ಯಭಿಚಾರ ವೃಷ್ಟಿಯಲ್ಲ. ಅದಕ್ಕೆ ಕಾರಣ ಸಂಶ್ಲೇಷವಲ್ಲ. ಅದರ ಉದ್ದೇಶ ಅಧರ್ಮದಲ್ಲಿ ಅಡಗಿರುವ ಧರ್ಮಪರಿಪಾಲನೆ. ಇದು ಅತಿ ಸೂಕ್ಷ್ಮವಿಚಾರ. ರಾಸಕ್ರೀಡೆಯಲ್ಲಿ ತೊಡಗಿದವನು ಒಂದೆಡೆಯಲ್ಲಿ ಅಡಚಣೆಯನ್ನು ನಿವಾರಿಸಬೇಕಾದ ಸಂದರ್ಭದಲ್ಲಿ ಕೈಗೊಂಡ ಕೆಲಸ -- ಯದಿಮೇ ಬ್ರಹ್ಮಚರ್ಯಂ ಸ್ಯಾತ್ -- ಎಂದು ತನ್ನ ನಿಷ್ಠೆಯನ್ನು ಪ್ರಕಾಶ ಪಡಿಸುತ್ತಾನೆ. ನಿಜವಾಗಿಯೂ ತಾನು ಬ್ರಹ್ಮಚಾರಿಯಾಗಿದ್ದರೆ ಈ ತೊಡಕು ನಿವಾರಣೆಯಾಗಲಿ ಎಂದ. ಅದು ಫಲಿಸಿತು. ಇದೇರೀತಿ ನಾವು ಒಪ್ಪಿಕೊಳ್ಳ ಬಹುದಾದ ರೀತಿಯಲ್ಲಿ ಇಂದ್ರಜಿತ್ತಿನ ಸಂಹಾರ ಪ್ರಕರಣದಲ್ಲಿ ಲಕ್ಷ್ಮಣನು ಶರಪ್ರಯೋಗಮಾಡುವ ವೇಳೆಯಲ್ಲಿ ಲೌಕಿಕಕ್ಕಿಂತ ವೈದಿಕ ಪ್ರಯೋಗ ಅಪ್ರತಿಮವಾದುದೆಂದು ತಿಳಿದು ಒಂದು ತತ್ವವನ್ನು ಅನುಷ್ಠಾನದಲ್ಲಿ ತೋರಿಸುತ್ತಾನೆ.

"ಧರ್ಮಾತ್ಮಾ ಸತ್ಯಸಂಧಶ್ಚ
ರಾಮೋ ದಾಶರಥಿರ್ಯದಿ
ಪೌರುಷೇ ಚಾಪ್ರತಿದ್ವಂದ್ವಃ
ಶರೈನಂ ಜಹಿ ರಾವಣಿಮ್"

"ದಶರಥಾತ್ಮಜನಾದ ಶ್ರೀರಾಮನು ಧರ್ಮಾತ್ಮನೂ ಸತ್ಯಸಂಧನೂ ಪೌರುಷದಲ್ಲಿ ಎದುರಿಲ್ಲದ ಅದ್ವಿತೀಯ ಪರಾಕ್ರಮಿಯೂ ಆಗಿರುವುದು ದಿಟವಾದರೆ, ಎಲೈ ಶರವೇ, ಈ ರಾವಣಪುತ್ರನನ್ನು ಸಂಹರಿಸು" ಎಂದು ನುಡಿದು ಬಾಣಪ್ರಯೋಗ ಮಾಡಿದನು. ಲಕ್ಷ್ಮಣನಿಗೆ ಸಾಮರ್ಥ್ಯವನ್ನು ಒದಗಿಸಿದ್ದು ರಾಮನಾಮ. ಅಂತೆಯೇ ಕೃಷ್ಣನೂ ಕೂಡ ಪಾಮರನಡತೆಯಲ್ಲಿ ಅಸಭ್ಯವಾಗಿ ತೋರಿಬರಬಹುದಾದರೂ ಅಂತರ ದೃಷ್ಟಿಯಲ್ಲಿ ಕೃಷ್ಣನು ಕೃಷ್ಣನೇ, ಧರ್ಮಾತ್ಮ

ಕೃಷ್ಣ ಶಬ್ದ ಆಕರ್ಷಣಾತ್ಮಕ, ಸ್ವರೂಪ, ಕೃತ್ಯ ನಡವಳಿಕೆ ಎಲ್ಲವೂ ಸ್ವಾಭಾವಿಕವಾಗಿ ಸರ್ವಾಕರ್ಷಕವಾದುದರಿಂದ ಆಕರ್ಷಕತ್ವವನ್ನು ಸಂಕಲ್ಪಾಧೀನ ಮಾಡಿ ಕೃಷ್ಣನಿಗೆ ಸಹಜವಾದ ಔನ್ನತ್ಯವು ಕಾಮಾಧೀನವಾದುದೆಂದು ಪಾಮರದೃಷ್ಟಿಯಿಂದ ಮನಗಾಣುವುದು ತಿಳಿಗೇಡಿಯ ಸ್ವಭಾವ. ಸೌಂದರ್ಯಮೂರ್ತಿ ಯಾದ ಕೃಷ್ಣನು ಸರ್ವವಿಧದಲ್ಲೂ ರಕ್ಷಣೆಗಾಗಿಯೇ ವ್ಯವಹರಿಸುತ್ತಿದ್ದ. ಕೃಷ್ಣನು ಸಂಕಲ್ಪಜನಿತವಾದ ಸಾಂಸಾರಿಕ ಪ್ರಪಂಚದಲ್ಲಿ ಪ್ರಾಬಲ್ಯವನ್ನು ತೋರಿಸುವ, ಶಂಕರದಗ್ಧನಾದ ಮನ್ಮಥನಿಗೆ ತುತ್ತಾದವನೆಂದು ಭಾವಿಸುವ ಬಗೆ ನೀಚತನ. ಅಷ್ಟರಿಂದ ಸಮಾಜಘಾತುಕನಾದ ದುರ್ಯೋಧನನಿಗೆ ಸಹಾಯನೀಡುವ ನೀತಿ ಬಲರಾಮನ ಪಾಲಿಗಿದ್ದರೂ ಅದಕ್ಕೆ ಅವಕಾಶ ಕೊಡದೆ, ಅಣ್ಣನಿಂದ ತಪ್ಪಿಸಿಕೊಂಡು ಧರ್ಮ ಪರಿಪಾಲನೆಗಾಗಿ ತಾನು ಮಾಡಬೇಕಾದ ಕರ್ತವ್ಯವನ್ನೆಲ್ಲ ತಾನೇ ಮುಖಂಡನಾಗಿ ಎಸಗಿದ. ಇದು ಧರ್ಮ -- ಕರ್ತವ್ಯ ಪರಿಪಾಲನೆ. ಅದರಲ್ಲಿ ನಿರತನಾಗಿ ಅಧರ್ಮ ವಂಚಕರ ನಿರಾಸದಲ್ಲಿ ಸತತೋದ್ಯುಕ್ತನಾದ ಅರ್ಜುನಸಾರಥಿ, ಧವಳ ಧ್ವಜ ಕೃಷ್ಣ. ಅಣ್ಣನನ್ನು ಹೀಯಾಳಿಸದೆ, ಆದರೆ ಅವನಕೈಗೆ ಸಿಕ್ಕದೆ ಲೋಕ ಸಂರಕ್ಷಣೆ ಅಂದರೆ ಸಮಾಜದ ಔನ್ನತ್ಯವನ್ನು ಉಳಿಸಿ ಕೊಟ್ಟವನೇ ಶ್ರೀಕೃಷ್ಣ ಪರಮಾತ್ಮ

ರಾಮನು ಸಹಾಯದೊಡನೆ ಯಶಸ್ಸು ಪಡೆದರೆ, ಕೃಷ್ಣನಿಗಾದರೋ ಸಹಾಯಶೂನ್ಯನಾಗಿ ದೋಷಗ್ರಸ್ತರನ್ನು ಹುಡುಕಿಕೊಂಡು ಹೋಗಿ ಲೋಕದಲ್ಲಿ ಕ್ಷೇಮಸ್ಥಾಪನೆಗೆ ದುಡಿಯಬೇಕಾಗಿ ಜನ್ಮತಾಳಿದವನಿಗೆ ವ್ಯಾಪಾರ. ಸ್ವಾರ್ಥ ಕ್ಷೇಮ ಚಿಂತನೆಯಿಲ್ಲದೆ, ಸತ್ಸಂಗದ ಏಳಿಗೆಗೆ ಸಂತತ ದುಡಿಯಬೇಕಾದುದು ಧರ್ಮಜ್ಞನ ನೋಟ ಮತ್ತು ನಡೆ. ಹಿಂಸಕನ ಹಿಂಸೆ ಅಧರ್ಮವಲ್ಲ. ಧರ್ಮಗ್ಲಾನಿಃ ಯದಾ ಭವತಿ -- ಅಧರ್ಮದ ಅಭ್ಯುತ್ಥಾನ ಎಂದು ಕಾಣಿಸಿಕೊಳ್ಳುತ್ತದೆಯೋ -- ತದಾತ್ಮಾನಂ ಸೃಜಾಮ್ಯಹಂ -- ಇದು ಪುರುಷೋತ್ತಮನ ನೋಟ, ನಡೆ. ಹಿರಿಯನಾದ ಅಣ್ಣನ ಕೈಗೆಸಿಕ್ಕದೆ, ಅವನನ್ನು ವಿರೋಧಿಸಿ ಅಶ್ಲೀಲತೆಗೆ ತುತ್ತಾಗದೆ ತಾನೇ ಧರ್ಮಸ್ಥಾಪನೆ ಮಾಡಿದನು. ಪಾರ್ಥಸಾರಥಿ ಪುರುಷೋತ್ತಮನಾಗುತ್ತಾನೆ. ಇದು ಸನಾತನಧರ್ಮ. ಅದರಲ್ಲಿ ಅಗ್ರಸ್ಥಾನವನ್ನು ಪಡೆದವನು ಶ್ರೀಕೃಷ್ಣ ಪರಮಾತ್ಮ ರಾಮನ ತಮ್ಮ ಲಕ್ಷ್ಮಣನ ಅಣ್ಣ. ಈ ರಹಸ್ಯವನ್ನು ಲೌಕಿಕವಾಗಿ ತೋರಿಸಲು ಒಂದು ಸನ್ನಿವೇಶವನ್ನು ಹುಡುಕಿ, ಕೌರವಪಾಂಡವಯುದ್ಧಕ್ಕೆ ಅವಕಾಶಮಾಡಿಕೊಟ್ಟು, ಕೌರವಪಕ್ಷಪಾತಿಯಾದ ಬಲರಾಮನಕೈಗೆ ಸಿಕ್ಕದೆ, ದುರ್ಯೋಧನನ ದ್ವೇಷಕ್ಕೆ ತುತ್ತಾದ ಪಾಂಡವಪಕ್ಷದಲ್ಲಿ ಸೇರಿಕೊಂಡು, ತನಗೂ ತನ್ನ ಅಣ್ಣನಿಗೂ ಇರುವ ವೈಲಕ್ಷಣ್ಯವನ್ನು ತೋರಿಸಿಕೊಟ್ಟ, ಅಣ್ಣನ ಪಕ್ಷದ ಅಧಿನಾಯಕನಾದ ದುರ್ಯೋಧನನ ತೊಡೆಯನ್ನು ತನ್ನ ಪಕ್ಷದ ಭೀಮನ ಮೂಲಕ ತುಂಡರಿಸಿ, ಆ ಸಂದರ್ಭದಲ್ಲಿ ಅಣ್ಣನ ನಡತೆಯು ಲೌಕಿಕವೆಂದೂ, ತನ್ನ ನಡತೆಯು ವೈದಿಕವೆಂದೂ, ವೈದಿಕದ ವಾಸನೆಯೇ ಇಲ್ಲದಿದ್ದ ಅರ್ಜುನನಿಗೆ ಉಪದೇಶಮಾಡಿ, ಅವನ ಅಹಂಕಾರವನ್ನು ತೊಡೆಯಲು ತಾನೇ ಸಾರಥಿಯಾಗಿ ಶತ್ರುದಮನಮಾಡಿ, ಪಾರ್ಥನ ಅಭ್ಯುದಯಕ್ಕೆ ಕಾರಣವಾಗಿ, ತನ್ನ ಕೃತ್ಯವು ಪಾರಮಾರ್ಥಿಕವಾದುದು ಎಂದು ತೋರಿಸಿಕೊಟ್ಟನು. ಇದರ ಹಿರಿಮೆಯನ್ನು ನಿಜವಾಗಿ ಅರಿತವನು ವೃದ್ಧ ಪಿತಾಮಹನಾದ ಭೀಷ್ಮನೆಂದು ತೋರಿಸಿಕೊಟ್ಟು ಭೀಷ್ಮಾಚಾರ್ಯನ ಆದರ್ಶವನ್ನು ಲೋಕಕ್ಕೆ ಬಹಿರಂಗಪಡಿಸುತ್ತಾನೆ.

"ತಸ್ಮಿನ್ ಅಸ್ತಮಿತೇ ಭೀಷ್ಮೇ
ಕೌರವಾಣಾಂ ಧುರಂಧರೇ
ಜ್ಞಾನಾನಿ ಅಲ್ಪೀಭವಿಷ್ಯಂತಿ
ತಸ್ಮಾತ್ ತ್ವಾಂ ಚೋದಯಾಮ್ಯಹಂ"

ಎಂಬುದಾಗಿ ಪಾಂಡವ ಜ್ಯೇಷ್ಠ ಧರ್ಮಪುತ್ರನೆಂಬ ಹೆಸರು ಪಡೆದಿದ್ದರೂ ತಿಳಿವಿಲ್ಲದವನಾದ ಯುಧಿಷ್ಠಿರನಿಗೆ ಭೀಷ್ಮನ ಸಹವಾಸದಲ್ಲಿ ಬಂದರೆ ತತ್ವರಹಸ್ಯವು ಗೊತ್ತಾಗುವುದು ಎಂದು ಅವನಿಗೆ ಜ್ಞಾನೋಪದೇಶ ಮಾಡಿದಂತೆಯೇ ಅರ್ಜುನನಿಗೆ ಕೀಳು ಮಟ್ಟದ ಭಾವನೆಯನ್ನು ಬಿಟ್ಟು ಸನ್ಮಾರ್ಗದಲ್ಲಿ ಮುಂದಾಳಾಗಿರುವುದು ಅತ್ಯಂತ ಶ್ರೇಯಸ್ಕರ, ಪ್ರಾಣ ಸಂರಕ್ಷಣೆಗಾಗಿ ಕರ್ತವ್ಯವನ್ನು ಕೈಬಿಡುವುದು ಸ್ವರೂಪ ಮೃತ್ಯು ಎಂದು ಗೀತೆಯಲ್ಲಿ ಉಪದೇಶಮಾಡಿದನು. ಕರ್ಮಣ್ಯೇನ ಅಧಿಕಾರಸ್ತೇ ಮಾ ಫಲೇಷು -- ಎಂಬ ಧರ್ಮನಿಷ್ಠೆಯನ್ನು ಸಮಾಜದಲ್ಲಿ ಪರಿಪಾಲಿಸುವುದು ಚೇತನನಿಗೆ ಅತಿ ಮುಖ್ಯವಾದ, ಅಪರಿಹಾರ್ಯವಾದ ಕರ್ತವ್ಯ ಎಂದು ತಿಳಿಸಿ, ಲಾಭಾ ಲಾಭೌ ಜಯಾ ಜಯೌ -- ಎಂಬ ಪ್ರಯೋಜನವನ್ನು ಗಮನಿಸದೆ 'ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ಎಂಬ ಧರ್ಮನಿಷ್ಠೆ, ಪರಿಪಾಲನೆ, ಕರ್ತವ್ಯ ನಿಷ್ಕಾಮ ವೃತ್ತಿ ಸಮಾಜದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯೂ ಗಮನಿಸಬೇಕು ಎಂಬುದೇ ಚರಮಶ್ಲೋಕದಲ್ಲಿ ಕೃಷ್ಣ ಪರಮಾತ್ಮನು ಕೊಟ್ಟಿರುವ ವಚನ. ಅದರಂತೆ ಕೃಷ್ಣನಿಗೆ ವಿಧೇಯನಾದ ಪಾರ್ಥನ ವಿರೋಧಿಗಳಿಗೆ ಪ್ರಾಣಹಾನಿ ಏರ್ಪಟ್ಟಿತು. ಕೃಷ್ಣನಲ್ಲಿ ಅತ್ಯಂತ ನಂಬಿಕೆಯಿಟ್ಟ ಅರ್ಜುನನ ವಿಷಯದಲ್ಲೂ ಗೀತೆಯ ಕೊನೆಯಲ್ಲಿ ಸರ್ವಜ್ಞನಾದ ಸಂಜಯನು ಉಪಸಂಹಾರ ಶ್ಲೋಕದಲ್ಲಿ ನುಡಿದಿರುತ್ತಾನೆ--

ಯತ್ರ ಯೋಗೇಶ್ವರಃ ಕೃಷ್ಣೋ
ಯತ್ರ ಪಾರ್ಥೋ ಧನುರ್ಧರಃ

ತತ್ರ ಶ್ರೀ ರ್ವಿಜಯೋಭೂತಿ
ಧ್ರುವಾ ನೀತಿರ್ಮತಿರ್ಮಮ

"ಎಲ್ಲಿ ಯೋಗೀಶ್ವರನಿರುವನೋ -- ಉಚ್ಚಾವ ರೂಪದಿಂದಿರುವ ಚೇತನಾ ಚೇತನ ವಸ್ತುಗಳಿಗೆ ಯಾವಯಾವ ಸ್ವಭಾವ ಯೋಗವುಂಟೋ ಆ ಎಲ್ಲ ಯೋಗಕ್ಕೂ ಈಶ್ವರನೂ ಆದ ವಸುದೇವ ಸೂನು ಕೃಷ್ಣನು ಇರುವನೋ -- ಮತ್ತು ಎಲ್ಲಿ ಅವನ ಪದ ದ್ವಂದವನ್ನೇ ಆಶ್ರಯವಾಗಿ ಉಳ್ಳ, ಅವನ ಸೋದರ ತ್ತೆಯ ಮಗ ಧನುರ್ಧರ ಪಾರ್ಥನಿರುವನೋ ಅಲ್ಲಿ ಶ್ರೀ, ವಿಜಯ, ಭೂತಿ, ನೀತಿ ಇವು ಧ್ರುವವಾಗಿ, ನಿಶ್ಚ ಲವಾಗಿ ಇರುವುವು" ಎಂದು ವಿಶ್ವಕಲ್ಯಾಣವು ಸ್ಥಿರ ವಾಗಿ ಉಳಿಯದೇಕಾದಲ್ಲಿ ಕೃಷ್ಣೋಪದೇಶದಿಂದ ಪವಿತ್ರತೆ ಪಡೆದ ಅರ್ಜುನನ ನಡತೆಯು ನಿಜವಾ ಗಿಯೂ ಸರ್ವಶ್ರೇಯಸ್ಕರ. ಇದು ಜೀವನಧರ್ಮ ಯೋಗ ಎಂಬುದು ಗೀತೆಯ ಉಪದೇಶ. ವೇದಾಂ ತದಲ್ಲಿ ಹೇಳಿರುವ 'ತತ್' ಎಂಬ ಕೃಷ್ಣನ ಮತ್ತು 'ತದೀಯ' ಎಂಬ ಅರ್ಜುನನ ನಿಷ್ಠೆಗಳಿಂದ ಈ ಉಪದೇಶದ ಪರಿಣಾಮವನ್ನು ತಿಳಿಯಬಹುದು.

ಗೀತೆಯನ್ನು ಒಳಗೊಂಡ ಮಹಾಭಾರತವು ಶಾಶ್ವತವಾದ ಜ್ಞಾನಾನುಷ್ಠಾನಗಳನ್ನು ವಿವರಿಸುವ ಕಾರಣ ರಾಮಾಯಣದಂತೆಯೇ ಉನ್ನತ ಮಟ್ಟದ ವ್ಯವಹಾರ ಎಂದು ಪ್ರಚಾರ ಪಡಿಸುವ ನೆಪದಲ್ಲಿ, ಈ ರಹಸ್ಯವನ್ನು ಒಳಗೊಂಡಿರುವುದರಿಂದ 'ಭಾರತಃ ಪಂಚಮೋವೇದಃ' ಎಂಬ ಹಿರಿಯ ಸ್ಥಾನವನ್ನು ಒಪ್ಪಿ, ಗೀತೋಪದೇಶವನ್ನು 'ದುಗ್ಧಂ ಗೀತಾಮೃತಂ ಮಹತ್' ಎಂಬಂತೆ, ಆತ್ಮನಿಗೆ ನಿರಂತರ, ಪರಿ ಪೂರ್ಣ ಆನಂದಾಮೃತವನ್ನು ಕೊಡಬಲ್ಲ ಗ್ರಂಥ ವೆಂದೂ, ತತ್ಕಾರಣ ಕೇಳುವುದಕ್ಕೆ ಇಂಪಾಗಿ -- ಗೀತಾ, ರಹಸ್ಯಾರ್ಥ ಪ್ರಕಾಶವಾಗಿ -- ಉಪನಿಷತ್ ಎಂಬ ಹೆಸರು ಸಮಂಜಸವಾಗಿ ತೋರುತ್ತದೆ.

ಮತ್ತೊಂದು ವಿಶೇಷವೇನೆಂದರೆ ಪರಮಾತ್ಮನ ಅವತಾರವಾದ ಕೃಷ್ಣನ ನುಡಿ ಮತ್ತು ಅವನು ಎಸಗಿದ ಕೆಲಸಗಳ ಹಿನ್ನೆಲೆಯಲ್ಲಿ ತೋರಿಬರುವ ಅವನ ರಕ್ಷಣ ರೂಪವಾದ ಗುಣಗಳನ್ನು ಭೀಷ್ಮಾ ಚಾರ್ಯರು ವಿಷ್ಣು ಸಹಸ್ರನಾಮದಲ್ಲಿ ಹೇಳಿರುವು ದರಿಂದ ಶ್ರೀಕೃಷ್ಣನ ಸ್ವರೂಪ, ಸ್ವಭಾವ, ವ್ಯಾಪಾರ, ಪ್ರಯೋಜನ ಮುಂತಾದ ಅತಿ ಮುಖ್ಯವಾದ ಅಂಶಗಳು ಪ್ರಣವದಲ್ಲಿ ಅಡಗಿರುವುದರಿಂದ, ಇದು ವೇದಕ್ಕೆ ಸೇರಿದ್ದು, ಉಪನಿಷತ್ತಿಗೆ ಸೇರಿದ್ದು. ಚೇತ ನನ ಉಜ್ಜೀವನಕ್ಕಾಗಿ ಪರಮಾತ್ಮನ, ಸರ್ವೇಶ್ವರನ ಪಾಲಿಗೆ ಸೇರಿದುದರಿಂದ ಫಲವೂ ಸರ್ವೇಶ್ವರ ನಿಗೇ ಸೇರಿದುದು. ಎಂದು ತೋರ್ಪಡಿಸುವುದ ಕ್ಕಾಗಿಯೇ ಲೋಕದಲ್ಲಿ 'ಸರ್ವಂ ಶ್ರೀಕೃಷ್ಣಾರ್ಪಣ ಮಸ್ತು' ಎಂದು ಅನುಸಂಧಾನ ಮಾಡುವ ಪದ್ಧತಿ ಯನ್ನು ವೈದಿಕರಲ್ಲಿ ಈಗಲೂ ಕಾಣಬಹುದು.

ಗೀತೆಯು ಭಾರತೀಯ ಆತ್ಮಸಂಸ್ಕೃತಿಯ ಪ್ರಪಂ ಚದ ಕೇಂದ್ರಸ್ಥಾನದಲ್ಲಿ ಬೆಳಗುತ್ತಿದೆ. ಅದು ಹಿಂದಿನ ವೇದ--ವೇದಾಂತಗಳ ಬೋಧನೆಯನ್ನು ಸಮಂಜ ಸವಾಗಿ ಸಂಗ್ರಹಿಸಿದೆ. ನಂತರ ಬಂದ ಆಧ್ಯಾತ್ಮಿಕ ಸಂಪ್ರದಾಯಗಳ ಮೇಲೆ ಅಪಾರವಾದ ಪ್ರಭಾವ ಬೀರಿದೆ. ಇದರಲ್ಲಿ ತತ್ವದೃಷ್ಟಿ ಮತ್ತು ಜೀವನ ಮಾರ್ಗ ಖಚಿತವಾಗಿ ಸಮನ್ವಯ ಗೊಳಿಸಲ್ಪಟ್ಟು 'ಜೀವನ ಧರ್ಮಯೋಗ'ವಾಗಿದೆ. ಪರಬ್ರಹ್ಮನು ಇದರಲ್ಲಿ ಪುರುಷೋತ್ತಮನಾಗಿ ಪ್ರೇಮವನ್ನು ಆಕ ರ್ಷಿಸಿ ಅನುಗ್ರಹಿಸಿದ್ದಾನೆ. ಮಾನವನ ಕ್ರಿಯಾಶೀ ಲತೆ, ಸತ್ಯಜಿಜ್ಞಾಸೆ ಮತ್ತು ರಸೋಪಾಸನೆಗಳು ಇಲ್ಲಿ ಕರ್ಮಯೋಗ, ಜ್ಞಾನಯೋಗ ಮತ್ತು ಭಕ್ತಿಯೋಗ ಗಳಾಗಿ ಭವ್ಯವಾಗಿ ಪರಿಣಮಿಸಿ ಪರಮಾತ್ಮನಲ್ಲಿ ಶರ ಣಾಗತಿಯಲ್ಲಿ ಪೂರ್ಣತೆಯನ್ನು ಪಡೆದಿವೆ. ಗೀತೆ ಯನ್ನು ಶ್ರೀಕೃಷ್ಣನು ತ್ರೈವರ್ಣಿಕರಿಗೆ ಮಾತ್ರ ಉಪ ದೇಶಿಸಲಿಲ್ಲ. ಸಮರಾಂಗಣದಲ್ಲಿ ಎಲ್ಲರೂ ಸೇರಿ ದ್ದರು ಮತ್ತು ಪರಸ್ಪರ ವಿನಾಶಕರವಾದ ಆಪತ್ಕಾಲ ದಲ್ಲಿ ಶಾಂತಿಸ್ಥಾಪನೆಗಾಗಿ ಗೀತೆಯು ಆವಿರ್ಭಾವ ವಾಯಿತು. ಹೀಗೆಂದು ಶತ್ರು ಪಕ್ಷದಲ್ಲಿ ಸೇರಿಕೊಂ ಡಿದ್ದ ಮಹಾಜ್ಞಾನಿ ಭೀಷ್ಮನು ಶರತಲ್ಪದಲ್ಲಿ ಮಲ ಗಿದ್ದಾಗ ಯುಧಿಷ್ಠಿರನಿಗೆ ಸಹಸ್ರನಾಮವನ್ನು "ಏಷ ಮೇಧರ್ಮಃ" ಎಂದು ಘಂಟಾಘೋಷವಾಗಿ ಹೇಳಿ, 'ಸರ್ವಪ್ರಹರಣಾಯುಧಃ, ವಿಶ್ವಂ ವಿಷ್ಣುಃ' -- ಎಂದು ಮುಗಿಸಿರುವುದರಿಂದ, ಚೇತನಾಚೇತನ ಕೋಟಿಗ ಳಿಗೆ, ಸರ್ವವಿಧದಲ್ಲೂ ಆಧಾರನಾದವನು ಪರ ಮಾತ್ಮ ಅವನು ಕೃಷ್ಣರೂಪತಾಳಿ, ಗೊಲ್ಲರ ಆವ ರಣದಲ್ಲಿ ಬಾಳಿ, ಗೋಸಂರಕ್ಷಣೆ ಮಾಡಿದ ವೇಣು ಪಾಣಿಯಾದವನು. ಇತರರ ಮಧ್ಯದಲ್ಲೂ ತನ್ನ ಆನಂದವನ್ನು ಕೊಳಲು ಮೂಲಕ ವ್ಯಕ್ತಪಡಿಸುತ್ತ, ಸಕಲ ಪ್ರಜೆ, ಪ್ರಾಣಿಗಳನ್ನು ತನ್ನ ಸಮೀಪಕ್ಕೆ ಆಕ ರ್ಷಿಸಬಲ್ಲ 'ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿಗಾ ನರ ಸಂಫಣಿಃ' ಎಂಬಂತೆ ಗಾನರಸದಿಂದ ಶಿಶು, ಪಶು, ಸರ್ವಭೇದವಿಲ್ಲದೆ ಉಳಿಸಬಲ್ಲ, ಆನಂದದ ಮಳೆ ಯನ್ನು ಸುರಿಸಿ ಹರಿಸಬಲ್ಲ ಪರಮಾತ್ಮ ಶ್ರೀಕೃಷ್ಣ. ಸರ್ವರಕ್ಷಕನೂ, ಸ್ವಯಂ ರಕ್ಷಕನೂ ಮತ್ತು ಪರ ಮಧರ್ಮವಾದ ಭಗವಂತನು ಯಾರಮನಸ್ಸಿನಲ್ಲಿ ಮೂಡುವನೋ ಅವನಿಗೆ ಕಲಿಯುಗದಲ್ಲೂ ಕೃತ ಯುಗದ ಹಿರಿಮೆ ತೋರುತ್ತಲೇ ಇರುವನು. (ಕೃತೇ ಕಲಿಯುಗಃ ತಸ್ಯ ಯಸ್ಯಚೇತಸಿ ನಾಚ್ಯುತಃ, ಕಲೌ ಕೃತಯುಗಃ ತಸ್ಯ ಯಸ್ಯಚೇತಸಿ ಕೈಶವಃ.) ಇದು ವೇದಾಂತಸಾರ. ಈ ಭಾವ ನೀಗಿದರೆ ಕೃತದಲ್ಲೂ ಸಹ ಅವನು ಕಲಿಯಾಗುತ್ತಾನೆ.

"ಏಕನೇಕ ವಿಲಾಸನ್
ಸಾಕಲ್ಯದೆ ಪೂರುಷಾರ್ಥ ಚತುರವನೀವನ್
ಲೌಕಿಕನು ಮಲೌಕಿಕನುಂ
ಶ್ರೀಕೃಷ್ಣಂ ಜೀವಧರ್ಮ ಪುಣ್ಯಾದರ್ಶನ್
ನರನೋ ನರದೌರ್ಬಲ್ಯವ
ಪರಿಪರಿಸಲ್ಬಂದ ವಿಶ್ವವಂತಸ್ಸತ್ವಂ
ಧರಿಸಿದ ರೂಪೋ ಕೃಷ್ಣಂ
ಪರಮಾದ್ಭುತಮೇನೊ ನಮಗೆ ಸತ್ವಂ ಶರಣಂ



# ಶ್ರೀರಂಗಪಟ್ಟಣ

---ಪ್ರೊ: ಹಾರೋಹಳ್ಳಿ ತಿರುವೇಂಗಡಶರ್ಮ.

ಶ್ರೀರಂಗಪಟ್ಟಣವು ಕರ್ನಾಟಕ ರಾಜ್ಯದ ಮಂಡ್ಯ ಜಿಲ್ಲೆಯಲ್ಲಿನ ಪುಣ್ಯಪ್ರದವಾದ ಒಂದ ವಿಷ್ಣುಕ್ಷೇತ್ರ. ಇಲ್ಲಿನ ಕ್ಷೇತ್ರಾಧಿಪತಿ ಶ್ರೀಮನ್ನಾರಾಯಣನ ಅರ್ಚಾರೂಪಿಯಾದ ಪಶ್ಚಿಮದ ಶ್ರೀರಂಗನಾಥಸ್ವಾಮಿ. ಕಾವೇರಿ ನದಿಯು ಕವಲೊಡೆದು ದ್ವೀಪವನ್ನಾಗಿಸಿದಾಗ ಮಧ್ಯದಲ್ಲಿ ರಾರಾಜಿಸುತ್ತಿರುವ ಪಟ್ಟಣ. ಇದೇ ರೀತಿಯಲ್ಲಿ ಕಾವೇರಿ ನದಿಯು ಇನ್ನೂ ಎರಡು ಸ್ಥಳಗಳಲ್ಲಿ ಕವಲೊಡೆದು ಮತ್ತೆ ಸಂಗಮಿಸಿ ಅಲ್ಲಿ ದ್ವೀಪವನ್ನಾಗಿಸಿ ಶ್ರೀರಂಗನಾಥಸ್ವಾಮಿಯ ಸಾನ್ನಿಧ್ಯವನ್ನು ಕರುಣಿಸಿರುವುದಾಗಿದೆ. ಇದರಿಂದ ಶ್ರೀರಂಗಪಟ್ಟಣದಲ್ಲಿ ಶಯನಿಸಿರುವ ಶ್ರೀರಂಗನಾಥನು "ಆದಿರಂಗ ಅಥವಾ ಪಶ್ಚಿಮದ ರಂಗನಾಥ" ಎಂದೂ, ಮೈಸೂರುಜಿಲ್ಲೆಗೆ ಸೇರಿರುವ ಬೆಳಕವಾಡಿ, (ಶಿಂಪಾ) ಎಂಬಲ್ಲಿ ಉಭಯ ಕಾವೇರಿಯ ಮಧ್ಯದಲ್ಲಿ ಅನಂತಶಯನನಾಗಿರುವ ಸ್ವಾಮಿಯ "ಮಧ್ಯರಂಗ" ಎಂದೂ, ತಮಿಳುನಾಡಿನ ತಿರುಚಿನಾಪಳ್ಳಿ ಎಂಬಲ್ಲಿ ಕಾವೇರಿಯ ಕವಲೊಡೆದು ಶ್ರೀರಂಗಕ್ಷೇತ್ರವನ್ನು ಸುತ್ತುವರಿದು, ಅನಂತಶಾಯಿಯಾಗಿರುವುದು "ಅಂತ್ಯರಂಗ, ಪೂರ್ವರಂಗ ಅಥವಾ ಶ್ರೀರಂಗನಾಥ". ವಿಭೀಷಣನ ಕೋರಿಕೆಯಂತೆ ಲಂಕಾಮುಖ ನಿವಾಸನಾಗಿ ದಕ್ಷಿಣಾಭಿಮುಖವಾಗಿ ಶೇಷಶಯನದಲ್ಲಿ ಸ್ವಾಮಿಯ ಪವಡಿಸಿರುವನು. ಅಷ್ಟೋತ್ತರ ದಿವ್ಯದೇಶಗಳಲ್ಲಿ ಪ್ರಥಮಸ್ಥಾನ ಪಡೆದಿರುವ ಈ ಅಪೂರ್ವ ಪೂರ್ವರಂಗನಾಥನ ಕ್ಷೇತ್ರವೇ ಶ್ರೀರಂಗಂ.

ಆದಿಯಲ್ಲಿ ಕಾವೇರಿಯು, ಶ್ರೀರಂಗಪಟ್ಟಣ ಕ್ಷೇತ್ರದಲ್ಲಿ ಶ್ರೀಮಹಾವಿಷ್ಣುವನ್ನು ಕುರಿತು ತಪಸ್ಸನ್ನಾಚರಿಸಿದಳು. ಭಗವಂತನು ಪ್ರತ್ಯಕ್ಷನಾಗಿ ಮೂರು ವರಗಳನ್ನು ಕರುಣಿಸಿದನು. ಆಗ ಕಾವೇರಿಯು ಸಂತೃಪ್ತಳಾಗಿ ಮೊದಲನೆಯ ವರದಿಂದ ಕಾವೇರಿನದಿಯು ಗಂಗಾನದಿಗಿಂತಲೂ ಹೆಚ್ಚು ಪುಣ್ಯ ಪಡೆದು ಮಹಿಮಾವಂತವಾದ ಪುಣ್ಯತಮನದಿಯಾಯ್ತು. ಎರಡನೆಯ ವರದಿಂದ ಶ್ರೀರಂಗಪಟ್ಟಣವು ಮಹಾವಿಷ್ಣು ಕ್ಷೇತ್ರವಾಯ್ತು. ಮೂರನೆಯ ವರದಿಂದ ಸ್ವಾಮಿಯ ಭಕ್ತರ ಅಭೀಷ್ಟಗಳನ್ನು ಯುಗಯುಗಾಂತರಗಳಲ್ಲಿಯೂ ನೆರವೇರಿಸುತ್ತಾ ಪಶ್ಚಿಮದ ರಂಗನಾಥನಾಗಿ ಅನಂತಶಯನನಾಗಿ ಶ್ರೀರಂಗಪಟ್ಟಣದಲ್ಲಿ ನೆಲೆಸುವಂತಾಯ್ತು.

ಮಹಾಲಕ್ಷ್ಮಿಯು ಸ್ವಾಮಿಯನ್ನರಸುತ್ತಾ ಬಂದು ಶ್ರೀರಂಗಪಟ್ಟಣದಲ್ಲಿ ಅನಂತಶಯನನಾಗಿ ಕಾವೇರಿಯಿಂದ ಸೇವೆ ಪಡೆಯುತ್ತಿರುವುದನ್ನೂ, ಕ್ಷೇತ್ರಮಹಿಮೆಯನ್ನೂ ಅರಿತು, ತಾನೂ ಇಲ್ಲಿಯೇ ಸ್ವಾಮಿಗೆ ವಾಯುವ್ಯದಿಕ್ಕಿನಲ್ಲಿ ಶಿಲಾರೂಪಿಯಾಗಿ ನೆಲೆನಿಂತಳು ಶ್ರೀರಂಗನಾಯಕಿಯಾಗಿ. ಇವನ್ನರಿತ ಬ್ರಹ್ಮರುದ್ರಾದಿಗಳು ಇಲ್ಲಿಗೆ ಬಂದರು. ಬ್ರಹ್ಮನು ಸ್ವಾಮಿಗೂ ಅಮ್ಮನವರಿಗೂ ವಿಮಾನವನ್ನು ನಿರ್ಮಿಸಿದನು. ಮಹಾವಿಷ್ಣುವಿನಿಂದ ಬ್ರಹ್ಮನು ಪಡೆದ ಪಾಂಚರಾತ್ರಾಗಮ ಪೂಜಾವಿಧಿಯನ್ನು ಈಗ ಬ್ರಹ್ಮನು ಇಲ್ಲಿ ನಾರದರಿಗೆ ಬೋಧಿಸಿದನು. ಈ ಕ್ಷೇತ್ರದ ಮಹಿಮೆಯನ್ನು ಈಶ್ವರನು ನಾರದರಿಗೆ ಬೋಧಿಸಿದನು.

ಒಂದಾನೊಂದು ಕಾಲದಲ್ಲಿ ಭೂಲೋಕದಲ್ಲಿ ಹನ್ನೆರಡು ವರ್ಷಗಳಿಗೂ ಮಿಕ್ಕು ಮಳೆ ಬೆಳೆಗಳಿಲ್ಲದೆ ದಾರುಣವಾದ ಕ್ಷಾಮ ಉಂಟಾಯಿತು. ಋಷಿಗಳಲ್ಲಿ ಕೆಲವರು ತಮ್ಮ ಉಳಿವಿಗೂ, ಜೀವನಾಧಾರಕ್ಕೂ ಮತ್ತು ತಪಃಸಾಧನೆಗೆ ಸೂಕ್ತ ಸುಭಿಕ್ಷ, ಪುಣ್ಯ ಕ್ಷೇತ್ರವನ್ನು ಅರಸುತ್ತಾ ಗೋದಾವರಿನದಿ ದಡದಲ್ಲಿದ್ದ ಗೌತಮರ ಆಶ್ರಮಕ್ಕೆ ಬಂದರು. ಗೌತಮರು ಋಷಿಗಳನ್ನು ಕಂಡು ಹರ್ಷಚಿತ್ತರಾಗಿ, ಅರ್ಘ್ಯ ಪಾದ್ಯಾಚಮನಗಳಿಂದ ಸತ್ಕರಿಸಿ ಅಂದು ತಮ್ಮ ಅತಿಥ್ಯವನ್ನು ಸ್ವೀಕರಿಸಬೇಕೆಂದು ಬೇಡಿದರು. ಗೌತಮರು ಆಗತಾನೇ ಆ ಪುಣ್ಯಭೂಮಿಯಲ್ಲಿ ಧಾನ್ಯವನ್ನು ಬಿತ್ತಿದುದನ್ನೂ, ಅದು ಅನತಿ ಕ್ಷಣಗಳಲ್ಲೇ ಮೊಳೆತು ಬೆಳೆದು ಫಲಭರಿತ ವಾದುದನ್ನೂ, ಆ ಧಾನ್ಯದಿಂದಲೇ ಶಿಷ್ಯರಿಂದ ಅಕ್ಕಿಮಾಡಿಸಿ, ಎಲ್ಲ ಋಷಿಗಳಿಗೂ ಮೃಷ್ಟಾನ್ನ ಸಂತರ್ಪಣೆ ಮಾಡಿಸಿದುದನ್ನು ಋಷಿಗಳೆಲ್ಲರೂ ಅಚ್ಚರಿಗೊಂಡು ಕಂಡರು. ತಮ್ಮ ಆಹ್ನಿಕವನ್ನು ಮುಗಿಸಿ ಬರುವುದರೊಳಗಾಗಿ ನಡೆದ ಈ ಅದ್ಭುತವು ಆ ನೆಲಜಲದ ಮಹಿಮೆಯೇ ಎಂದು ನಿರ್ಧರಿಸಿದರು. ಆಗ ಋಷಿಗಳಲ್ಲಿ ಕೆಲವರು ಅಸೂಯೆಯಿಂದಲೂ, ಲೋಭದಿಂದಲೂ, ಆ ಮಹಾಮಹಿಮದಾದ ಗೋದಾವರಿ ಕ್ಷೇತ್ರದಿಂದ ಗೌತಮರನ್ನು ಉಚ್ಚಾಟಿಸಿ ತಮ್ಮದಾಗಿಸಿಕೊಳ್ಳಬೇಕೆಂದು ಭಾವಿಸಿದರು. ತಾವು ಅನಾಯಾಸವಾಗಿ ಆ ಪುಣ್ಯಭೂಮಿಯಲ್ಲಿ ಸುಖವಾಗಿ ನೆಲೆಸಬಹುದೆಂದು ಊಹಿಸಿ ಕುತಂತ್ರ ಒಂದನ್ನು ಮಾಡಿದರು. ತಮ್ಮ ತಪಃಶಕ್ತಿಯಿಂದ ಒಂದು ಕೃತ್ರಿಮ ಗೋವನ್ನು ಓಡಿಸಲು ಶಿಷ್ಯರಿಗೆ ಅಪ್ಪಣೆಮಾಡಿದರು. ಆಗ ಆ ಗೋವು ಓಡುತ್ತಾ ಬಂದು ಗೌತಮರ ಪಾದಗಳಬಳಿ ಬಿದ್ದು ಅಸುನೀಗಿತು. ಆಗ ಆ ಋಷಿಗಳೆಲ್ಲರೂ ಗೌತಮರು ಗೋಹತ್ಯೆ ಮಾಡಿದರು ಎಂದು ಬೊಬ್ಬೆಹಾಕಿದರು. ಆಗ ಗೌತಮರು ತಮ್ಮ ದಿವ್ಯದೃಷ್ಟಿಯಿಂದ ಋಷಿಗಳ ಮೋಸಕೃತ್ಯವನ್ನರಿತು ಆ ವಂಚಕರನ್ನು ವೇದಬಾಹಿರ ಮೂರ್ಖರಾಗಿ ಎಂದು ಶಪಿಸಿ ಆ ಸ್ಥಳವನ್ನು ತ್ಯಜಿಸಿ ತೀರ್ಥಯಾತ್ರೆಮಾಡುತ್ತಾ ಈ ಅದ್ವಿತೀಯ ಕ್ಷೇತ್ರವಾದ ಪುರಾಣಪ್ರಸಿದ್ಧವಾದ ಶ್ರೀರಂಗಪಟ್ಟಣವನ್ನು ತಲುಪಿದರು. ದೈವಯೋಗದಿಂದ ಭೃಗು, ಅತ್ರಿ, ಬೋಧಾಯನ, ಯಾಜ್ಞವಲ್ಕ್ಯ, ಕಣ್ವ, ಶುಕ್ರ, ಪರಶುರಾಮೇತ್ಯಾದಿ ಮಹಾಮುನಿಗಳೂ ಅಲ್ಲಿ ಸೇರಿದರು. ಗೌತಮರು ಎಲ್ಲರೊಡನೆ ಶ್ರೀರಂಗನಾಥಸ್ವಾಮಿಯನ್ನು ಕುರಿತು ಯಾಗಮಾಡಿದರು. ಸಂತುಷ್ಟನಾದ ಭಗವಂತನು ಪ್ರತ್ಯಕ್ಷನಾದನು. ಸನಿಹದ ತುಲಸಿ ವನದಲ್ಲಿರುವ ಬೃಹನ್ನಲ್ಮೀಕದಲ್ಲಿ ಭೂಸ್ಥಾಯಿಯಾಗಿರುವ ರಂಗನಾಥಸ್ವಾಮಿ ಮತ್ತು ರಂಗನಾಯಕಿ ಅಮ್ಮನವರನ್ನು ವಿಮಾನಸಹಿತ ಪಡೆದುಕೊಂಡು ಸೇವಿಸಬೇಕೆಂದು ಆಣತಿಯಿತ್ತನು. ಆಗ ಗೌತಮರು ಬ್ರಹ್ಮರುದ್ರಾದಿಗಳನ್ನೂ ಇಂದ್ರಾದಿ ದೇವತೆಗಳನ್ನು ಕಾಮಧೇನುವನ್ನೂ ಆಹ್ವಾನಿಸಿದರು. ಎಲ್ಲರೂ ತುಲಸೀವನವನ್ನು ಪ್ರವೇಶಿಸಿ, ಅಲ್ಲಿ ಅನೇಕ ಶೃಂಗಗಳಿಂದಕೂಡಿದ, ನಾಗಲೋಕದಿಂದಲೇ ಆವಿರ್ಭವಿಸಿರುವಂತಹ ಮಹತ್ತರವಾದ ಹುತ್ತವನ್ನು ಕಂಡು ಸಂತಸಗೊಂಡರು. ಕಾಮಧೇನುವಿನ ಕ್ಷೀರಧಾ



# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ಶುಲ್ಕಸಹಿತ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ. 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

**ಪೇಷ್ಕಾರ್.**

ರೆಯಿಂದ ಆ ಬೃಹತ್ ಹುತ್ತವನ್ನು ಕರಗಿಸುವಲ್ಲಿ ಗೌತಮರು ಸಫಲರಾದರು. ಆಗ ಭೂಗತವಾಗಿದ್ದ ವಿಷ್ವಕ್ಸೇನ, ಗರುಡ, ಸುದರ್ಶನಾಳ್ವಾರ್ ಅವರುಗಳನ್ನು ಕಂಡು ಅವರಿಗೆ ಪ್ರದಕ್ಷಿಣಾನಮಸ್ಕಾರಗಳನ್ನು ಅರ್ಪಿಸಿದರು. ವಾಯುವ್ಯದಿಗ್ಭಾಗದಲ್ಲಿ ಸ್ಥಾಪಿತರಾಗಿದ್ದ ಶ್ರೀರಂಗನಾಯಕಿ ಅಮ್ಮನವರನ್ನು ದರ್ಶನಮಾಡಿ, ಅವರನ್ನು ಸ್ತೋತ್ರಗಳಿಂದ ಪ್ರಸನ್ನಗೊಳಿಸಿ ಅವರ ಅನುಗ್ರಹ ಪಡೆದು ಅಂಜಲಿ ಬದ್ಧರಾಗಿ ಪ್ರದಕ್ಷಿಣಾಕಾರವಾಗಿ ಬಂದು ರಂಗ ವಿಮಾನವನ್ನು ನಮಸ್ಕರಿಸಿ ಗರ್ಭಗೃಹವನ್ನು ಪ್ರವೇಶಿಸಿದರು. ಅಂದು ಮೋಕ್ಷ ಮಾಸ ಶುಕ್ಲಪಕ್ಷ ಸಪ್ತಮಿ ಸ್ಥಿರವಾಸರದ ಅಭಿಜಿತ್ ಲಗ್ನದಲ್ಲಿ, ಆದಿಶೇಷನ ಮೇಲೆ ಪವಡಿಸಿ ಬಲಭುಜವನ್ನು ಶಿರಸ್ಸಿಗೆ ಇಟ್ಟುಕೊಂಡು ಎಡಭುಜವನ್ನು ನೀಡಿ ಮತ್ತು ದಕ್ಷಿಣ ಪಾದವನ್ನು ನೀಳವಾಗಿರಿಸಿ, ವಾಮಪಾದವನ್ನು ಸ್ವಲ್ಪ ಮಡಿಚಿದಂತೆಯೂ, ವಕ್ಷಸ್ಥಳದಲ್ಲಿ ಲಕ್ಷ್ಮಿಯನ್ನು ಹೊಂದಿ, ಕಾವೇರಿ ದೇವಿಯ ಮೃದುಹಸ್ತಗಳಿಂದ ಲಾಲಿಸುತ್ತಿರುವ ಪಾದಗಳನ್ನೂ, ಸೂರ್ಯಕೋಟಿಸಮಪ್ರಭೆಯುಳ್ಳ ಸುಂದರ ವದನಾರವಿಂದದಿಂದ ಕೂಡಿದ ಶ್ರೀರಂಗನಾಥಸ್ವಾಮಿಯ ದರ್ಶನ ಪಡೆದು ಕೃತಾರ್ಥರಾದರು. ಗೌತಮರು ಪುಲಕಾಂಕಿತರಾಗಿ ಮಂಗಳಾಷ್ಟಕ ಶ್ಲೋಕಗಳಿಂದ ಸ್ತೋತ್ರಮಾಡಿದರು. ಆಗ ಸ್ವಾಮಿಯು ಪ್ರಸನ್ನನಾಗಿ ಈ ಕ್ಷೇತ್ರವು ಇನ್ನು ಮುಂದೆ "ಗೌತಮಕ್ಷೇತ್ರ"ವೆಂದು ಹೆಸರು ಪಡೆಯಲಿ ಎಂದೂ, ದೇವಾಲಯ ವಿಮಾನವು "ಬ್ರಹ್ಮಾನಂದವಿಮಾನ" ಎಂದು ಪ್ರಸಿದ್ಧವಾಗಲಿ ಎಂದು ಅಪ್ಪಣೆ ಕೊಡಿಸಿದರು. ಮರುದಿವಸದಿಂದ ಗೌತಮರು ಮುನಿವೃಂದದೊಡನೆ ನಾರದರಿಂದ ಉಪದೇಶಿಸಲ್ಪಟ್ಟ ಪಾಂಚರಾತ್ರ ಪೂಜಾಕ್ರಮದಿಂದ ಪೂಜಿಸುತ್ತಾ ಸಪ್ತಾಹವನ್ನಾಚರಿಸಿದರು. ಈ ಸಪ್ತಾಮದ ಮುಕ್ತಾಯ ದಿನವಾದ ವೈಶಾಖಪೂರ್ಣಿಮೆಯಂದು ಭಗವಂತನು ಗರುಡಾರೂಢನಾಗಿ ಎಲ್ಲರಿಗೂ ದರ್ಶನ ನೀಡಿದರು. ಈಗಲೂ ವೈಶಾಖಪೂರ್ಣಿಮೆಯಂದು ಸ್ವಾಮಿಗೆ "ಗರುಡೋತ್ಸವವೂ". ಮೇಷ ಶುಕ್ಲ ಸಪ್ತಮಿಯನ್ನು "ಶ್ರೀರಂಗ ಜಯಂತಿ"ಯ ಆಚರಣೆಯಲ್ಲಿರುವುದು.

ಗಂಗೆಯು ತನಗೆ ಪ್ರಾಪ್ತವಾದ ಪಾಪರಾಶಿಯನ್ನು ನಿವಾರಿಸಿಕೊಳ್ಳಲು ತುಲಾಮಾಸದಲ್ಲಿ ಕಾವೇರಿಯಲ್ಲಿ ವಾಸಮಾಡುವಳು. ತುಲಾಮಾಸದ ಕೃಷ್ಣಪಕ್ಷದ ದಶಮಿಯಂದು ಕಾವೇರಿ ಅಷ್ಟತೀರ್ಥ ಸ್ನಾನಮಾಡಿ ಶ್ರೀರಂಗಪಟ್ಟಣದ ಶ್ರೀರಂಗನಾಥಸ್ವಾಮಿ ಅವರ ದರ್ಶನ ಪಡೆಯುವ ಮಾನವರು ಪುನರ್ಜನ್ಮರಹಿತರಾಗಿ ಮೋಕ್ಷಸಾಮ್ರಾಜ್ಯ ಪಡೆಯುವರೆಂಬುದು ಸತ್ಯವು.

(ಆಧಾರ : ಶ್ರೀರಂಗಪಟ್ಟಣ ದೇವಾಲಯ ಚರಿತ್ರೆ -- ಎಸ್. ನರಸಿಂಪರಂಗನ್)

# ಅಜಾತ ಶತ್ರು

---ಸಂತ ಹರಿಹರಾನಂದ ಸರಸ್ವತೀ.

ವೈರಿ ಕುಲದವರೇ ಮೂರು ಮಂದಿ "ಶ್ರೀರಾಮ" ನನ್ನು ಮೆಚ್ಚಿ ಮುಕ್ತಕಂಠದಿಂದ ಕೊಂಡಾಡಿ ಶರಣಾದ ಪ್ರಸಂಗ ಶ್ರೀಮದ್ರಾಮಾಯಣದಲ್ಲಿ ಉಲ್ಲೇಖವಾಗಿದೆ. ಅದೊಂದು ಅಪೂರ್ವ ಸನ್ನಿವೇಶ. ಇಲ್ಲಿ ವೈರಿಕುಲವೆಂದರೆ -- ರಾವಣನ ಕುಟುಂಬವೆಂದು ಅರ್ಥ. ಮೊದಲು ಶ್ರೀರಾಮನಿಗೆ ಮಾರುಹೋದ ವ್ಯಕ್ತಿ "ಶೂರ್ಪನಖಿ" -- ನರೋತ್ತಮನಾದ ರಾಮನ ಅಪ್ರತಿಮ ರೂಪ ಸಂಪತ್ತಿಗೆ ಮಾರುಹೋಗಿ ಅವನನ್ನು ಮದುವೆಯಾಗುವ ಬಯಕೆಯನ್ನು ವ್ಯಕ್ತಪಡಿಸುತ್ತಾಳೆ. ದಾಶರಥಿಯು ತಾನು ಏಕಪತ್ನೀವ್ರತವನ್ನು ಕೈಗೊಂಡಿರುವುದಾಗಿಯೂ ಪ್ರಸ್ತುತ ಶೂರ್ಪನಖಿಯನ್ನು ಮದುವೆಯಾಗುವುದು ಸಾಧ್ಯವಿಲ್ಲವೆಂದು ತಿಳಿಸಿದಾಗ -- ನಿರಾಶಳಾಗುತ್ತಾಳೆ. ತರುವಾಯ ಶ್ರೀರಾಮನೇ ಸಲಹೆಮಾಡಿದಂತೆ ಲಕ್ಷಣವಂತನಾದ ಲಕ್ಷ್ಮಣನಲ್ಲಿ ಬರುತ್ತಾಳೆ. ಅವನ ರೂಪದನ್ನೂ ಮೆಚ್ಚಿದ ಅವಳು ತನ್ನನ್ನು ಮದುವೆಯಾಗು ಎಂದು ಪೀಡಿಸುತ್ತಾಳೆ. ರಾಮಾನುಜನು -- ತಾನು ಸೀತಾರಾಮರಿಗೆ ದಾಸನಾಗಿ ಸೇವೆಮಾಡುತ್ತಿರುವ ಓರ್ವ ಸೇವಕನೆಂದೂ ನಿನ್ನನ್ನು ಮದುವೆಯಾದರೆ ನನ್ನೊಡನೆ ನೀನೂ ದಾಸ್ಯವೃತ್ತಿಯನ್ನು ಅವಲಂಬಿಸಿ ಬನ್ನಪಡಬೇಕಾಗುತ್ತದೆ --ಎಂದೂ ತಿಳಿಸಿ, ಇಷ್ಟು ಸ್ಫುರದ್ರೂಪಿಯಾಗಿರುವ (ಶೂರ್ಪನಖಿಯು ಷೋಡಶಿಯ ರೂಪಧರಿಸಿ ಬಂದಿರುತ್ತಾಳೆ.) ನೀನು ಶ್ರೀರಾಮನನ್ನೇ ಮದುವೆಯಾದಲ್ಲಿ ನಿನಗೆ ಒಂದು ಗೌರವದ ಸ್ಥಾನವಿರುತ್ತದೆಯೆಂದೂ ಅವನೇ ನಿನಗೆ ವರನೆಂದೂ ಹೇಳಿ ನಯವಾಗಿ ಅವಳನ್ನು ತಿರಸ್ಕರಿಸಿ ಮತ್ತೆ ರಾಮನಲ್ಲಿಗೇ ಕಳುಹಿಸುತ್ತಾನೆ. ಶ್ರೀರಾಮಾ! ರಾಮಾ, ಎಂದು ಬಂದ ಅವಳನ್ನು ಕಂಡ ರಾಮನು ಮತ್ತೇಕೆ ಬಂದೆ? ಎನ್ನಲು, 'ಪ್ರಭು.... ಆ ಲಕ್ಷ್ಮಣನು ನನ್ನನ್ನು ಒಲ್ಲೆ' ಎನ್ನುತ್ತಾನೆ. ನೀನೇ ನನ್ನನ್ನು ಮದುವೆಯಾಗಬೇಕಂತೆ. ನನಗೆ ತಕ್ಕ ಗಂಡನೀನೇಯಂತೆ. ಹಾಗೆಂದು ನನ್ನ ಅವನು ಮತ್ತೆ ನಿನ್ನಲ್ಲಿಗೇ ಕಳುಹಿಸಿದ ಎಂದುತ್ತರಿಸುತ್ತಾಳೆ. ಶ್ರೀರಾಮನು ಅವಳನ್ನು ಕುರಿತು ಷೋಡಶೀ -- ಅವನಿಗೆ ನಿನ್ನ ಮೇಲೆ ಮನಸ್ಸಿದೆ. ಮೇಲುನೋಟಕ್ಕೆ ಬೇಡವೆಂದಿದ್ದಾನೆಯಷ್ಟೆ, ಮೇಲಾಗಿ ನನ್ನ ಪೂರ್ಣಸಮ್ಮತಿ ಇದೆಯೋ ಇಲ್ಲವೋ ಎಂದು ತಿಳಿಯಲು ನಿನ್ನನ್ನು ನನ್ನಲ್ಲಿಗೆ ಮತ್ತೆ ಕಳುಹಿಸಿರುವನು ತಿಳಿಯಿತೇ. ಅವನನ್ನೇ ಮದುವೆಯಾಗುವುದು ಸೂಕ್ತ ಎಂದ.

ಶೂರ್ಪನಖಿ ಮತ್ತೆ ಓಡಿದಳು ಲಕ್ಷ್ಮಣನಲ್ಲಿಗೆ. ಅವನು ಪುನಃ ಶ್ರೀರಾಮನಲ್ಲಿಗೇ ಕಳುಹಿಸಿದ. ಹೀಗೆ ಏಳೆಂಟು (ಸಾರಿಯು) ಬಾರಿ ನಡೆಯಲು ಕೆರಳಿ ಕೆಂಡವಾದ ಶೂರ್ಪನಖಿಯು -- 'ಜಾನಕಿ' ಇರುವುದರಿಂದಲ್ಲವೇ ಈ ರಾಮನು ನನ್ನನ್ನು ತಿರಸ್ಕರಿಸುತ್ತಾನೆ. ಅವಳನ್ನೇ ಮುಗಿಸಿಬಿಟ್ಟರೆ ಕಡೆಗೆ ರಾಮನು ವಿಧಿ ಇಲ್ಲದೇ ನನ್ನನ್ನೇ ಮದುವೆಯಾಗುತ್ತಾನೆ. ' ಅವನ 'ಏಕಪತ್ನೀವ್ರತವೂ' ಮುಂದು ಬೀಳುತ್ತದೆ ಎಂದು ಚಿಂತಿಸಿ, ತನ್ನ ಮಾನವವೇಷವನ್ನು ಕಳಚಿ ರಾಕ್ಷಸಿಯರೂಪದಲ್ಲಿ 'ಸೀತೆಯನ್ನೇ ನುಂಗಲು' ಮುಂದೆ ದೊಡ್ಡ ಬಾಯಿ ತೆರೆದು ಮುನ್ನುಗ್ಗಿದಾಗ -- ಶ್ರೀರಾಮನು ಓ, ಲಕ್ಷ್ಮಣಾ ಎಂದು ಕರೆದು ರಾಕ್ಷಸಿಯ ಭಂಗಕ್ಕೆ ಸೂಚನೆ ನೀಡುತ್ತಾನೆ. ಕೂಡಲೇ ರಾಮಾನುಜನು ಧಾವಿಸಿ ಬಂದು ರಕ್ಕಸಿಯಾದ ಶೂರ್ಪನಖಿಯ ಕಿವಿ -- ಮೂಗನ್ನು ಕತ್ತರಿಸಿ ವಿಕಾರಗೊಳಿಸುತ್ತಾನೆ. ನಂತರ ಶೂರ್ಪನಖಿಯು ಹರಿದ ಮೂಗು, ಸುರಿದ ರಕ್ತದೊಂದಿಗೆ ಲಂಕೆಯನ್ನು ಸೇರಿ ತನ್ನ ಅಗ್ರಜನಾದ ಲಂಕೇಶನೆದುರು ಪಂಚವಟಿಯಲ್ಲಿರುವ ಶ್ರೀರಾಮ -- ಲಕ್ಷ್ಮಣರ ವಿಷಯ ತಿಳಿಸಿ - ಈ ವಿಕಾರವು ಆ ರಾಮನ ತಮ್ಮ ಲಕ್ಷ್ಮಣನಿಂದ ಆಯಿತೆಂದು ತಿಳಿಸಿ -- ಶ್ರೀರಾಮನನ್ನು ದೂರುವ ಬದಲು ಅವನ ಅಪ್ರತಿಮ ರೂಪ ಸಂಪತ್ತಿಯನ್ನು ತನ್ನ ಅಗ್ರಜನೆದುರು ಮುಕ್ತವಾಗಿ ಕೊಂಡಾಡುತ್ತಾಳೆ. ಅವನ ಮೋಹನರೂಪ ಅವಳಲ್ಲಿ ನೆಲೆಯಾಗಿ ನಿಲ್ಲುತ್ತದೆ. "ಪುಂಸಾಂ ಮೋಹನ ರೂಪಾಯ ಪುಣ್ಯಶ್ಲೋಕಾಯ ಮಂಗಳಂ" ಎಂದಲ್ಲವೇ ಅವನನ್ನು ಋಷಿಮುನಿಗಳು ಸ್ತುತಿಸಿರುವುದು.

ಇನ್ನು ಶ್ರೀರಾಮನಿಗೆ ಮಾರುಹೋದ ಎರಡನೆಯ ವ್ಯಕ್ತಿ ಪರಮಸಾತ್ವಿಕನಾದ ವಿಭೀಷಣ ಮೂರ್ತಿ. ತನ್ನ ಅಣ್ಣ ಲಂಕೇಶನ ವಿಪರೀತ ಬುದ್ಧಿಯನ್ನು ಕಂಡು ಮರುಗಿ ಅವನಿಗೆ ನಾಲ್ಕು ಹಿತೋಕ್ತಿ ಹೇಳಿ, ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸುವುದರಿಂದ -- ತನಗೇ ಅಲ್ಲದೆ ಇಡೀ ರಾಕ್ಷಸ ಕುಲಕ್ಕೇ ಕ್ಷೇಮವೆಂದೂ, ಹೇಳಿದರೂ ಫಲಕಾರಿಯಾಗದೇ ಕಡೆಗೆ ಕುಪಿತನಾದ ರಾವಣನಿಂದ ತುಂಬಿದ ಸಭೆಯಲ್ಲಿ ತಿರಸ್ಕೃತನಾಗಿ, ಇನ್ನು ತಾನು ಅಗ್ರಜನ ಮುಖವನ್ನು ನೋಡುವುದಿಲ್ಲವೆಂದು ಸಂಕಲ್ಪಗೈದು, ತನ್ನ ನಾಲ್ಕು ಮಂದಿ ಮಂತ್ರಿಗಳೊಡನೆ ನೇರವಾಗಿ ದಕ್ಷಿಣಸಮುದ್ರದ ಉತ್ತರದಂಡೆಯಲ್ಲಿರುವ ಶ್ರೀರಾಮನಲ್ಲಿಗೆ ಬಂದು ಶರಣಾಗುತ್ತಾನೆ. ಶತ್ರುಪಕ್ಷದ ತನ್ನನ್ನು ಆತ್ಮೀಯವಾಗಿ ಸ್ವಾಗತಿಸಿ (ತನಗೆ ಆಶ್ರಯ ನೀಡುವಲ್ಲಿ ಸುಗ್ರೀವಾದಿಗಳ ವಿರೋಧವಿದ್ದರೂ) ಶತ್ರು -- ಮಿತ್ರರೆಂಬ ಭೇದವಿಲ್ಲದೇ ಶರಣಾಗಿ ಬಂದವರಿಗೆ ಆಶ್ರಯ ಕೊಡುವ ತನ್ನ ವ್ರತವನ್ನು ಎತ್ತಿ ಹಿಡಿದು ತನಗೆ ಆಶ್ರಯನೀಡಿದ ಕರುಣಾಮಯಿ ಶ್ರೀರಾಮನ ಸಂಪನ್ನವಾದ ದಯಾದಿ ಮಾನವೀಯ ಕಲ್ಯಾಣಗುಣಗಳಿಗೆ ತಲೆಬಾಗಿದ.

ಇನ್ನು ಸೀತೆಯ ಎದುರು ಬಂದಾಗಲೆಲ್ಲಾ ರಾವಣನು ಶ್ರೀರಾಮನನ್ನು ಕುರಿತು "ಶಂಕೇ ಜೀವತಿವಾ ನವಾ" ಅವನು ಜೀವಿಸಿರುವುದರಲ್ಲಿಯೇ ತನಗೆ ಅನುಮಾನವೆಂದು ಹೇಳುತ್ತಿದ್ದವನು ಸ್ವತಃ ಶ್ರೀರಾಮನ ಎದುರು ಲಂಕೆಯ ರಣಾಂಗಣದಲ್ಲಿ ಯುದ್ಧಕ್ಕೆ ನಿಂತಾಗ -- ರಾಮನ ಯುದ್ಧವಿಕ್ರಮವನ್ನು ಕಂಡು ಲಂಕೇಶನು ಭಲಾ -- ಭಲಾ -- ಎಂದು ತಲೆದೂಗುತ್ತಾ "ರಂಜನೀಯಶ್ಚ ವಿಕ್ರಮೈಃ" ಶ್ರೀರಾಮನ ಯುದ್ಧ ವಿಕ್ರಮವೂ ರಂಜನೀಯವಾಗಿದೆ ಎಂದು ಪ್ರಶಂಸುತ್ತಾನೆ. ಕಡೆಗೆ ಆ ನರೋತ್ತಮ ಶ್ರೀರಾಮನ "ಬ್ರಹ್ಮಾಸ್ತ್ರ"ಕ್ಕೆ ತುತ್ತಾಗಿ ನೆಲಕಚ್ಚಿದಾಗ ಲಂಕೇಶನು—

'ತಂ ಮನ್ಯೇ ರಾಘವಂ ವೀರಂ
ನಾರಾಯಣಮನಾಮಯಂ'

ಎಂದು ಉದ್ಗಾರ ತೆಗೆದು ಈ ರಘುವೀರನು -- ಸಾಮಾನ್ಯ ಮಾನವನಲ್ಲ ಇವನು ಸಾಕ್ಷಾತ್ ಶ್ರೀ ನಾರಾಯಣನೇ ಎಂದು ಸ್ತುತಿಸಿ ಕೊನೆಯುಸಿರೆಳೆಯುತ್ತಾನೆ.





# ತಿ. ತಿ. ದೇವಸ್ಥಾನಗಳು, ತಿರುಪತಿ

# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

ಶ್ರೀನಿವಾಸನ ಹಾಡುಗಳು--ಭಾಗ--೨ (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4--30

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) --ವಿ. ಬಾದರಾಯಣ ಮೂರ್ತಿ 12--50

ಪುರಂದರೋಪನಿಷತ್ (ಪುರಂದರದಾಸರ ಏಳು ಕೃತಿ ವಿವರಣೆ) --ಬನ್ನಂಜೆ ಗೋವಿಂದಾಚಾರ್ಯ 7--00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) --ಸಂ. ಕೆ. ಅಪ್ಪಣ್ಣಾಚಾರ್ಯ 3--75

ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) --ಸಂ. ಕೆ. ಅಪ್ಪಣ್ಣಾಚಾರ್ಯ 2--25

ಸ್ತೋತ್ರ ಕುಸುಮಮಾಲಾ --ಸಂ. ವೆಂಕಟಾಚಲ 3--00

ಆಚಾರಗಳು ಆಡಂಬರಗಳು --ಕೆ. ಚಂದ್ರಮೌಳಿ 0--40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 2--50

" " (ಕನ್ನಡ ಲಿಪಿಯಲ್ಲಿ) 0--12

### ಮಕ್ಕಳಿಗಾಗಿ :

ಶ್ರೀಪಾದರಾಜರು --ಎಂ. ಎಸ್. ಗುಂಡೂರಾವ್ 0--75

ಮಹಿಪತಿದಾಸರು --ಶಾನಭಾಗ 0--85

ಪ್ರಸನ್ನ ವೆಂಕಟದಾಸರು --ವಿ. ಬಾದರಾಯಣಮೂರ್ತಿ 0--80

ಗೋಪಾಲದಾಸರು --ರುಕ್ಮಿಣಿಗಿರಿಮಾಜಿ 0--75

### ಹಿಂದಿ :

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ --ಡಾ. ಎಂ. ಸಂಗಮೇಶಂ 0--20

ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) 11--00

ತೀರ್ಥರಾಜ ತಿರುಪತಿ --ಡಾ. ಎಂ. ಸಂಗಮೇಶಂ 1--50

### ಸಂಸ್ಕೃತ :

ಶ್ರೀ ವೇಂಕಟೇಶ್ವರ ಸುಪ್ರಭಾತಂ 0--12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0--62

ಕಠೋಪನಿಷತ್ --ಡಾ. ಕೆ. ಸಿ. ವರದಾಚಾರಿ ಹಾಗೂ --ಡಾ. ಡಿ. ತಾತಾಚಾರ್ಯ 15--00

ಮಾರ್ಕಂಡೇಯ ಸಂಹಿತಾ 18--00

ತತ್ತ್ವಸಂಖ್ಯಾನಂ -- ಆರ್. ರಾಮಮೂರ್ತಿ ಶರ್ಮಾ 2--00

ಬ್ರಹ್ಮಸೂತ್ರ ಭಾಷ್ಯ (ಭಾಗ--೧) -- ಆರ್. ರಾಮಮೂರ್ತಿ ಶರ್ಮಾ 30--00

ಅಲಂಕಾರ ಸಂಗ್ರಹ -- ಸಂ--ಕೆ. ಭಾಸ್ಕರರಾವ್ 16--00

ಸೀತಾರಾಮಾಂಜನೇಯಂ --ಡಾ. ಡಿ. ಅರ್ಕಸೋಮಯಾಜಿ 50--00

ಪ್ರಶ್ನೋಪನಿಷತ್ 11--00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ --ಸಂ--ಡಾ. ಎಸ್. ಬಿ. ರಘುನಾಥಾಚಾರ್ಯ 25--00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30 ಶತಾಂಶ ರಿಯಾಯಿತಿಯೂ, 500 ರೂಗಳಿಂದ 1000ರೂ.ವರೆಗೆ 25 ಶತಾಂಶ ರಿಯಾಯಿತಿಯೂ, 100 ರೂಗಳಿಂದ 500 ರೂ.ವರೆಗೆ 15 ಶತಾಂಶ ರಿಯಾಯಿತಿಯೂ ಉಂಟು.

ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ :

**ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,**

ತಿ. ತಿ. ದೇ. ತಿರುಪತಿ.

# ಶಕ್ತಿದೇವತೆ ಸಂಸ್ಕೃತ ಸಾಹಿತ್ಯದಲ್ಲಿ

ಡಾ॥ ---ವಿದ್ವಾನ್ ಬ. ನ. ಗುಂಡೂರಾವ್.

ಜಗತ್ಕಲ್ಯಾಣಕಾರಿ ಉದಾತ್ತ ಭಾವನೆಗಳಿಂದ ಓತಪ್ರೋತವಾಗಿರುವ ಸಂಸ್ಕೃತ ಸಾಹಿತ್ಯದ ಒಂದು ಮಾತು ಹೀಗಿದೆ--

ಸ್ವಂ ಸ್ವಂ ಚರಿತ್ರಂ ಶಿಕ್ಷೇರನ್
ಪೃಥಿವ್ಯಾಂ ಸರ್ವಮಾನವಾಃ

ಪೃಥ್ವಿಯ ಸಮಸ್ತಜನ, ತಂತಮ್ಮ ಅಧಿಕಾರಾನುಸಾರ -- ಯೋಗ್ಯತಾನುಸಾರ ತಂತಮ್ಮ ಆತ್ಮೋದ್ಧಾರಕ್ಕೆಂದು ಶುದ್ಧ ಚಾರಿತ್ರ್ಯ ಬೆಳೆಸಿಕೊಳ್ಳಲವಕಾಶವಿದೆ. ಧರ್ಮಪಥದಿಂದ ದೂರಸರಿದ ಯಾವುದೇ ವ್ಯಕ್ತಿ, ಶ್ರೇಯಸ್ಸು ಪಡೆಯಲು ಸಾಧ್ಯವಿಲ್ಲ. ಇದು ಭಾರತೀಯ ಸಾಹಿತ್ಯದ ಮೂಲ ಸಿದ್ಧಾಂತ. ದೇವನೊಬ್ಬ ನಾಮ ಹಲವು -- ಅವನ ಉಪಾಸನಾ ಮಾರ್ಗಗಳೂ ನೂರಾರುಂಟು. ಅವರವರ ಭಾವಕ್ಕೆ ಅವರವರ ಭಕ್ತಿಗೆ ತಕ್ಕಂತೆ.

ಪುರುಷ -- ಪ್ರಕೃತಿ; ಜಗತ್‌ಪಿತ -- ಜಗನ್ಮಾತೆ -- ಇವು ಒಂದೇ ನಾಣ್ಯದ ಎರಡು ಮುಖಗಳಂತೆ. ಶ್ರುತಿಗಳು ಯಾವುದನ್ನು ಪರಬ್ರಹ್ಮವಸ್ತು ಎಂದಿತು. ಅದನ್ನೇ ಲೋಕದ ಭಕ್ತವೃಂದ ದೇವರು ಎಂದಿತು. ಭಗವಂತ ಎಂದಿತು -- ಜಗನ್ಮಾತೆ ಎಂದಿತು. ಮಹಾಲಕ್ಷ್ಮಿ -- ಗೌರಿದೇವಿ -- ಸರಸ್ವತಿ -- ಕಾಳಿ -- ತ್ರಿಪುರಸುಂದರಿ -- ಲಲಿತೆ ಇತ್ಯಾದಿ ಹೆಸರುಗಳಿಂದ ಜಗನ್ಮಾತೆಯನ್ನು ಕರೆದರು, ಆರಾಧಿಸಿದರು. ಸ್ತ್ರೀ ವಾಚಕವಾದುದೆಲ್ಲ ಶಕ್ತಿ. ಶಕ್ತಿ ಮತ್ತು ಶಕ್ತಿವಂತ ಒಂದೇ, ಬೇರ್ಪಡಿಸಲು ಅವಕಾಶವಿಲ್ಲ. ಭಗವಂತನೇ ಶಕ್ತಿ. ಶಕ್ತಿಯೇ ಭಗವದ್ರೂಪ.

ಲೋಕೋದ್ಧಾರಕ್ಕೆ -- ಭಕ್ತ ಜನರುದ್ಧಾರಕ್ಕೆ ದೇವರು ಯಾವುದೇ ರೂಪದಲ್ಲಿ ಅವತರಿಸಬಹುದು. ಹಲವಾರು ವಿಶೇಷ ಸಮಯ ಸಂದರ್ಭಗಳಲ್ಲಿ ಈ ದೈವೀಶಕ್ತಿ ವಿಶಿಷ್ಟರೂಪ ಧರಿಸುತ್ತದೆ.

ದೇವಾನಾಂ ಕಾರ್ಯ
ಸಿದ್ಧ್ಯರ್ಥಂ ಆವಿರ್ಭವತಿ ಸಾ

ದುರ್ಗಾಸಪ್ತಶತಿಯ ಈ ಮಾತು ಚಿಂತನೀಯವಾಗಿರುತ್ತದೆ. ಈ ಶಕ್ತಿಯನ್ನು ಭಗವತೀ -- ಮಹಾಮಾಯೆ -- ಜಗದಂಬೆ ಎಂದೆಲ್ಲ ಕರೆದಿದ್ದಾರೆ. ಶಕ್ತಿ ಇಲ್ಲದೆ ಯಾವ ಕಾರ್ಯವೂ ಆಗಲಾರದಷ್ಟೆ!! ಎಲೆ ಅಲುಗಾಡಬೇಕಾದರೂ ಒಂದು ಶಕ್ತಿ ಬೇಕೇಬೇಕಲ್ಲ!!

ಶ್ರೀಹರಿಯ ನಿಗ್ರಹಶಕ್ತಿಯನ್ನು ನಿಗ್ರಹಿಸುತ್ತಾಳೆ ಲಕ್ಷ್ಮೀದೇವಿ ಎನ್ನುವ ವಿದ್ವನ್ಮಣಿ ವೇಂಕಟಾಧ್ವರಿ ಹೇಳುತ್ತಾರೆ. --ತಾಯಿ, ನೀನು ಯಾರ ಮೇಲೆ ಪ್ರಸನ್ನಳಾಗುವೆ ಅವರನ್ನು ಶ್ರೀಹರಿಯ ಶಕ್ತಿ ನಿಗ್ರಹಿಸಲಾರದು.

ನಿತ್ಯಂ ವಿಶ್ವಂ ವಶ್ಯತಿ
ಹರಿರ್ನಿಗ್ರಹಾನುಗ್ರಹಾಭ್ಯಾಂ
ಆದ್ಯೇ ಶಕ್ತಿಂ ವಿಘಟಯತಿ ತೇ
ಹಂತ ಕಾರುಣ್ಯ ಪೂರಃ

ಶ್ರೀರಾಮಚಂದ್ರ ಪ್ರಭು ತಾಟಕಿಯನ್ನೂ ವಾಲಿಯನ್ನೂ ಕೊಂದದ್ದೇಕೆ? ಕರುಣಾಮಯಿಯಾದ ಸೀತಾಮಾತೆ ತನ್ನ ದಯಾದೃಷ್ಟಿ ಬೀರದೇ ಇದ್ದಾಗ. ಅತ್ಯಂತ ಕ್ರೂರಕರ್ಮ ಮಾಡಿದ ಕಾಕಾಸುರನನ್ನು ಸಹ ಪ್ರಭು ಕಾಪಾಡಿದ್ದೇಕೆ -- ಕ್ಷಮಿಸಿದ್ದೇಕೆ? ಅವನನ್ನು ಕ್ಷಮಿಸಲು ಸೀತಾಮಾತೆ ಸಂಕಲ್ಪಿಸಿದ್ದಳಾದ್ದರಿಂದ -- ಎನ್ನುತ್ತಾನೆ ಸಂಸ್ಕೃತದ ಕವಿ.

ಗೀರ್ವಾಣ ಭಾಷಾ ಕವಿಗಳ ದೃಷ್ಟಿಯಲ್ಲಿ ಶಕ್ತಿದೇವತೆ ಹೀಗೆ ಮೆರೆದಿದ್ದಾಳೆಂದು ಹಲವು ಉದಾಹರಣೆಗಳ ಮೂಲಕ ನೋಡೋಣ. ಕಾಶ್ಮೀರಿ -- ಬಂಗಾಳಿ -- ಮೈಥಿಲಿ ಭಾಷಾ ಸಾಹಿತ್ಯಗಳಲ್ಲಂತೂ ಶಕ್ತಿಯ ಬಣ್ಣನೆ ವ್ಯಾಪಕ ಹಾಗೂ ವೈವಿಧ್ಯಪೂರ್ಣವಾಗಿದೆ.

ಮಹಿಷಾಸುರ ಮರ್ದಿನಿ ಯನ್ನು ಕುರಿತು ಅನೇಕ ಕವಿಗಳು ಅನೇಕ ರೀತಿಯಲ್ಲಿ ತಮ್ಮ ಕಲ್ಪನಾ ವಲ್ಲರಿಯನ್ನು ಹರಿಯಬಿಟ್ಟಿದ್ದಾರೆ. ಮಹಿಷನ ಆಕ್ರಮಣಕ್ಕೆ ಏಕಾದಶರುದ್ರರು ಭಯಭೀತರಾದರು. ಸೂರ್ಯಮಂಡಲ ಅಲ್ಲಕಲ್ಲೋಲವಾಯ್ತು. ಇಂದ್ರನ ವಜ್ರಾಯುಧ ವ್ಯರ್ಥವಾಯ್ತು. ಆಗ ವಿಜೃಂಭಿಸಿ ಅವನನ್ನು ಹತಮಾಡಿದ ಭಗವತಿ ನಮ್ಮನ್ನು ಕಾಪಾಡಲಿ -- ಎಂಬ ಅರ್ಥ ಬರುವ ಈ ಶ್ಲೋಕದ ಭಾವ ಸೌಂದರ್ಯವನ್ನವಲೋಕಿಸಿರಿ--



## ಕೊಡೆಗಳ ನೀಡಿಕೆ ಯೋಜನೆ

ವಿವಿಧ ದೇವಾಲಯಗಳಿಗೆ ಉತ್ಸವಾದಿಗಳಲ್ಲಿ ಬಳಸಲು ಆಲಯೋಪಯೋಗಿ ಕೊಡೆಗಳನ್ನು (ಶ್ವೇತ ಛತ್ರಗಳು) ರಿಯಾಯಿತಿ ದರಗಳಲ್ಲಿ ನೀಡಲು ತೀರ್ಮಾನಿಸಲಾಗಿದ್ದು, ಈ ಯೋಜನೆಯಂತೆ ವಿವಿಧ ದೇವಾಲಯಗಳವರು ಕೊಡೆಗಳಿಗಾಗಿ 50 ಶತಾಂಶ ರಿಯಾಯಿತಿಯ ಹಣ ರೂ. 1000/- ವನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಬ್ಯಾಂಕ್ ಡಿ.ಡಿ.ಯ ರೂಪದಲ್ಲಿ ಕಳುಹಿಸುತ್ತ ಆಯಾ ಜಿಲ್ಲೆಗಳ ಅಸಿಸ್ಟೆಂಟ್ ದೇವಾದಾಯ (ಮುಜರಾಯಿ) ಕಮಿಷನರ್ ಮೂಲಕವಾಗಿ ತಮ್ಮ ಅಭ್ಯರ್ಥನೆಗಳನ್ನು ಕಳುಹಿಸಿದಲ್ಲಿ ಮಾತ್ರವೇ ನೀಡಲಾಗುವುದು. ಕೊಡೆಗಳನ್ನು ತಿರುಪತಿಯಿಂದ ಆಯಾ ದೇವಾಲಯಗಳವರೇ ಕೊಂಡೊಯ್ಯಬೇಕಾಗುವುದು.

ವಿವರಗಳಿಗಾಗಿ ಬರೆಯಿರಿ :---ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇ. ತಿರುಪತಿ.

## ಧ್ವನಿವರ್ಧಕ ವಿತರಣಾಯೋಜನೆ

ವಿವಿಧ ಹಿಂದೂ ದೇವಾಲಯಗಳಲ್ಲಿ ಧಾರ್ಮಿಕ ಕಾರ್ಯಕ್ರಮಗಳ ಪ್ರಸಾರಕ್ಕಾಗಿ ತಿ. ತಿ.ದೇ. ಗಳ ವತಿಯಿಂದ ಧ್ವನಿವರ್ಧಕಗಳನ್ನು ರಿಯಾಯಿತಿ ದರದಲ್ಲಿ ನೀಡುವ ಯೋಜನೆಯಿದೆ. 50 ಶತಾಂಶ ರಿಯಾಯಿತಿಯಲ್ಲಿ ನೀಡಲಾಗುವ ಧ್ವನಿವರ್ಧಕಗಳಿಗಾಗಿ ದೇವಾಲಯಗಳವರು ನೀಡಬೇಕಾದ ಮೊತ್ತ ರೂ. 3370/- ಈ ಹಣಕ್ಕೆ ಬ್ಯಾಂಕ್ ಡಿ.ಡಿ.ಯನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಪಡೆದು ಆಯಾ ಜಿಲ್ಲೆಯ ಅಸಿಸ್ಟೆಂಟ್ ಮುಜರಾಯಿ ಕಮಿಷನರ್ ಅವರ ಮೂಲಕ ತಮ್ಮ ಅರ್ಜಿಗಳನ್ನು ಕಳುಹಿಸಬಹುದು.

**ವಿವರಗಳಿಗಾಗಿ ಬರೆಯಿರಿ :**
**---ಕಾರ್ಯನಿರ್ವಹಣಾಧಿಕಾರಿ,**
**ತಿ.ತಿ.ದೇ. ತಿರುಪತಿ.**

ವಿದ್ರಾವಣೇ ರುದ್ರ
ವೃಂದೇ ಸವಿತರಿತರಲೇ
ವಜ್ರಿಣಿ ಧ್ವಸ್ತ ವಜ್ರೇ
ಜಾತಾಶಂಕೇ ಶಶಾಂಕೇ
ವಿರಮತಿ ಮರುತಿ
ತ್ಯಕ್ತವೈರೇ ಕುಬೇರೇ
ವೈಕುಂಠೇ ಕುಂಠಿತಾಸ್ತ್ರೇ
ಮಹಿಷಮತಿರುಷಂ
ಪೌರುಷೋಪಘ್ನನಿಘ್ನಂ
ನಿರ್ವಿಘ್ನಂ ನಿಘ್ನತೀ ವಃ
ಶಮಯತು ದುರಿತಂ
ಭೂರಿಭಾವಾ ಭವಾನೀ

ಇನ್ನೊಬ್ಬ ಕವಿಯ ಕಲ್ಪನೆ ಹೀಗಿದೆ-- ಶಿವ ಪಾರ್ವತಿಯರ ವಿವಾಹವಾಗಿದೆ. ನವವಧು ಪಾರ್ವತಿ ಲಜ್ಜಾಮಿಶ್ರಿತ ಪ್ರೇಮಭಾವದಿಂದ ಸ್ವಲ್ಪಹಾಗೆ ತಲೆ ಎತ್ತಿನೋಡಿದಳು. ಶಿವನ ಶರೀರದ ಮೇಲೆ ಗೋನಾಸ -- ಎಂಬ ಜಾತಿಯ ಭಯಂಕರ ಸರ್ಪ ಕಂಡು ಭಯಪಟ್ಟು ಔಷಧಿರಜವನ್ನು ತನ್ನ ಶರೀರಕ್ಕೆ ಲೇಪಿಸಿಕೊಂಡಳು. ಅಷ್ಟರಲ್ಲಿ ಇನ್ನೊಂದು ಸರ್ಪ ಹೆಡೆಯಾಡಿಸಿತು. ಗೌರಿ ದೇವಿ ವಿಷಘ್ನಿ -- ಎಂಬ ಮೂಲಿಕೆಯನ್ನು ಕೈಗೆ ಕಟ್ಟಿಕೊಂಡಳು. ಶಿವನ ಕಂಠದಲ್ಲಿ ಹಾಲಾಹಲವಿದೆ. ಅದರಿಂದ ರಕ್ಷಣೆ ಪಡೆಯಲು ಆಕೆ ಯಾವುದೋ ಮಣಿಯನ್ನು ಕೈಲಿ ಹಿಡಿದಳು. ಶಿವನ ಸುತ್ತ ಭಯಂಕರ ಭೂತಗಣಗಳಿವೆ. ಇನ್ನೇನುಗತಿ --ಎಂದು ತವರುಮನೆಯ ಹಿರಿಯರು ಹೇಳಿಕೊಟ್ಟಿದ್ದ ಮಂತ್ರಗಳನ್ನು ಜಪಿಸ ತೊಡಗಿದಳು. ಹೀಗೆ ಭಯಚಕಿತೆಯಾದ ಪಾರ್ವತಿ ನಮ್ಮನ್ನು ರಕ್ಷಿಸಲಿ--

"ಗೋನಾಸಾಯ ನಿಯೋಜಿತಾಗದರಜಾಃ
ಸರ್ಪಾಯ ಬದ್ಧೌಷಧಿಃ
ಕಂಠಸ್ಥಾಯ ವಿಷಾಯ ವೀರ್ಯಮಹತಃ
ಪಾಣೌಮಣೇನ್ ಬಿಭ್ರತೀ
ಭರ್ತರ್ಭೂತಗಣಾಯ ಗೋತ್ರ
ಜರತೀ ನಿರ್ದಿಷ್ಟಮಂತ್ರಾಕ್ಷರಾ
ರಕ್ಷತ್ವದ್ರಿಸುತಾ ವಿವಾಹ ಸಮಯೇ
ಪ್ರೀತಾ ಚ ಭೀತಾ ಚ ವಃ

ಒಮ್ಮೆ ಲಕ್ಷ್ಮಿಗೂ ಪಾರ್ವತಿಗೂ ಜಗಳವಾಯ್ತು. ಮಾತು ಸ್ವಲ್ಪ ಬಿಸಿಯೇರಿತು. ಈ ಮಾತಿನ ವೈಖರಿ ಗಮನಿಸಿ--

ಲಕ್ಷ್ಮಿ:-- ಪಾರ್ವತಿ, ಭಿಕ್ಷುಕ ಎಲ್ಲಿ ಹೋಗಿದ್ದಾನೆ?

ಪಾರ್ವತಿ :-- ಬಹುಶಃ ಬಲಿಚಕ್ರವರ್ತಿಯ ಯಜ್ಞ ಶಾಲೆಗೆ ದಾನಕೇಳಲು ಹೋಗಿರಬಹುದಲ್ಲವೇ?

ಲಕ್ಷ್ಮಿ:-- ಈ ದಿನ ಕುಣಿತ ಎಲ್ಲಿ?

ಪಾರ್ವತಿ :-- ಬಹುಶಃ ಬೃಂದಾವನ ಪ್ರಾಂತದಲ್ಲಿರಬೇಕು.

ಲಕ್ಷ್ಮಿ:-- ಕೈಲಿರುವ ಈ ಮೃಗಶಿಶು ಯಾವುದು.

ಪಾರ್ವತಿ :-- ವರಾಹಮೃಗ ನನಗೆ ತಿಳಿಯದು.

ಲಕ್ಷ್ಮಿ:-- ಮುದಿ ಎತ್ತಿನ ಯಜಮಾನ ಎಲ್ಲಿ ?

ಪಾರ್ವತಿ :-- ಈ ವಿಚಾರ ಗೋಪಾಲಕನಿಗೆ ತಿಳಿದಿರಬಹುದು.

ಜಗನ್ಮಾತೆಯರಾದ ಲಕ್ಷ್ಮಿ ಪಾರ್ವತಿಯರ ಈ ವ್ಯಂಗೋಕ್ತಿ ನಮ್ಮನ್ನು ರಕ್ಷಿಸಲಿ.

ಭಿಕ್ಷಾರ್ಥೀ ಸ ಕ್ವ ಯಾತಃ
ಸುತನು ಬಲಿಮಖೇ
ತಾಂಡವಂ ಕಾದ್ಯ ಭದ್ರೇ
ಮನ್ಯೇ ವೃಂದಾವನಾಂತೇ
ಕ್ವನು ಸ ಮೃಗಶಿಶುಃ
ನೈವ ಜಾನೇ ವರಾಹಂ
ಬಾಲೇ ಕಚ್ಚಿನ್ನ ದೃಷ್ಟೋ
ಜರಠವೃಷಪತಿಃ ಗೋಪ ಏವಾಸ್ಯವೇತ್ತಾ
ಲೀಲಾ ಸಲ್ಲಾಪ ಇತ್ಥಂ ಜಲನಿಧಿ
ಹಿಮವತ್ಕನ್ಯಯೋಃ ತ್ರಾಯತಾಂ ವಃ

ಜಯಪುರದ ಅರಮನೆಯಲ್ಲಿ ಭವ್ಯಸುಂದರವಾದ ಭಗವತಿಯ ಪ್ರತಿಮೆಯೊಂದಿದೆ -- ಅದರ ಪಾದಪೀಠದಲ್ಲಿ ಕೆತ್ತಿರುವ ಶ್ಲೋಕ ಹೀಗಿದೆ--

ಉಮೇಶ್ವರೀ ಉಮಾಮಯಿ
ರಮೇಶ್ವರೀ ರಮಾಮಯಿ
ಗಿರೀಶ್ವರೇ ಪ್ರಮಾಮಯಿ
ಕ್ಷಮಾಮಯಿ ಕ್ಷಮಾವತಾಮ್

ಸುಧಾಕರೇ ಸುಧಾಮಯಿ
ಚರಾಚರೇ ವಿಧಾಮಯಿ
ಕ್ರಿಯಾಸು ಸಂವಿಧಾಮಯಿ
ಸ್ವಧಾಮಯಿ ಸ್ವಧಾವತಾಮ್

ಜಗತ್ಸು ಚೇತನಾಮಯಿ
ಮನಃ ಸು ವಾಸನಾಮಯಿ
ಕವೀಂದ್ರ ಭಾವನಾಮಯಿ
ಪ್ರಭಾಮಯಿ ಪ್ರಭಾವತಾಮ್

ಘನೇಷು ಚಂಚಲಾಮಯಿ
ಕಲಾವತಾಂ ಕಲಾಮಯಿ
ಶರೀರಿಣಾಂ ಇಳಾಮಯಿ
ಶಿಲಾಮಯಿ ಸದಾವತಾಮ್

ಜಗತ್ತು ಬದುಕುವುದು ಜಗನ್ಮಾತೆಯ ಕರುಣೆಯಿಂದ. ಕರುಣೆ ಧರಿಸಿದ ರೂಪವೇ ಜಗನ್ಮಾತೆ. ಆಕೆಯ ಕೃಪಾ ದೃಷ್ಟಿಯ ಒಂದು ಅಲೆ ನಮ್ಮತ್ತ ಹರಿದು ಬರಲೆಂದು ಬೇಡುವುದಷ್ಟೇ ನಮ್ಮ ಕರ್ತವ್ಯ.



# ಶರನ್ನವರಾತ್ರಿ

ಅನಂತ ಚಿಂತಾಮಣಿ ಜ್ಯೋತಿಷೀ.

ಪ್ರಕೃತಿ ತಾಯಿಯು ಹಸಿರುಡುಗೆಯಿಂದ ಶೋಭಿಸಿ ಬೆಳೆಸಿರಿಯಿಂದ ಕಂಗೊಳಿಸುವ ಕಾಲವು ಶರತ್ಕಾಲವೆನಿಸಿದೆ. ಮೈ ಮನಗಳಿಗೆ ಸಂಪತ್ತಿನ ಸಂತಸವನ್ನು ಸಂತೃಪ್ತಿಯ ಸಮಾಧಾನವನ್ನು ತರುವ ಈ ಶರತ್ಕಾಲವು ಉಳಿದ ಋತುಗಳಿಗಿಂತ ಮುಖ್ಯವಾದುದು. ಈ ಕಾಲದಲ್ಲಿ ಗುಡುಗು ಮಳೆಗಳ ಆರ್ಭಟವಿಲ್ಲ, ಕೆಸರು ರಾಡಿಗಳ ಕಾಟವಿಲ್ಲ. ಮನಕ್ಕೆ ನೀರಸವಾಗಿರುವ ಮೋಡಗಳಿಲ್ಲ. ಎಲ್ಲರಿಗೆ ಮುದವನ್ನು ಕೊಟ್ಟು ಪ್ರಸನ್ನತೆಯ ಪರಿಸರವನ್ನು ನಿರ್ಮಿಸುವ ಅವಧಿಯಾಗಿದೆ.

ಶರತ್ಕಾಲವು ಆಶ್ವಯುಜದಿಂದ ಆರಂಭವಾಗಿ ಕಾರ್ತಿಕಕ್ಕೆ ಕೊನೆಗೊಳ್ಳುತ್ತದೆ. ಈ ಕಾಲದಲ್ಲಿ ವಿಶೇಷವಾಗಿ ದೇವಿಪೂಜೆಗೆ ಮಹತ್ವ ಕೊಟ್ಟಿರುತ್ತಾರೆ. ಇದಕ್ಕೊಂದು ಕಾರಣವಿದೆ. ೩೬೦ ದಿವಸಗಳಿಂದ ಕೂಡಿದ ಈ ನಮ್ಮ ಸಂವತ್ಸರದಲ್ಲಿ ೪೦ ನವರಾತ್ರಿಗಳಾಗುತ್ತವೆ. (೪೦x೯= ೩೬೦) ಆಶ್ವೀನಮಾಸದಲ್ಲಿ ಸೂರ್ಯನು ಪೂರ್ವ ದಿಶೆಯಲ್ಲಿರುವುದರಿಂದ ಹಗಲು ಮತ್ತು ರಾತ್ರಿಗಳು ಸರಿಸಮವಾಗಿರುತ್ತವೆ. ಸಮರಾತ್ರಿನ್ ದಿವೇ ಕಾಲೇ ವಿಷುವಾದ್ವಿಷುವಂ ಚ ತತ್ (ಅಮರಕೋಶ ಕಾಲವರ್ಗ ಶ್ಲೋ ೧೪) ಎಂಬಂತೆ ಸರಿಸಮವಾದ ಹಗಲು ರಾತ್ರಿಗಳಿಂದ ಕೂಡಿದ ಅವಧಿಯನ್ನು ವಿಷುವ ಎನ್ನುವರು. ಈ ವಿಷುವತ್ ಕಾಲದ ಶುಕ್ಲ ಪಕ್ಷದ ಆರಂಭದಿಂದ ೯ ದಿವಸಗಳ ತನಕ ಶಕ್ತಿ ಆರಾಧನೆಗೆ ಪ್ರಾಶಸ್ತ್ಯ ನೀಡಲಾಗಿದೆ. ಸತ್ವರಜ ತಮ -- ಈ ತ್ರಿಗುಣಗಳ ಸಾಮ್ಯಾವಸ್ಥೆಯನ್ನು ಪ್ರಕೃತಿ ಎಂದು ಕರೆಯಲಾಗುತ್ತದೆ. ಸತ್ವ ರಜ ತಮಗಳು ಸಮಾನ ಪ್ರಮಾಣದಲ್ಲಿದ್ದರೆ ಪ್ರಕೃತಿ ಎಂಬ ಹೆಸರು. ಸತ್ವರೂಪ ಹಗಲಿನ ಬೆಳಕು, ತಮೋರೂಪ ರಾತ್ರೆ, ಮತ್ತು ಇವುಗಳ ಮಧ್ಯಭಾಗ ರಜೋ ರೂಪ ಸಂಧ್ಯಾ ಈ ಮೂರು ಸಾಮ್ಯಾವಸ್ಥೆಯ ಸಮಯದಲ್ಲಿ ಪ್ರಕೃತಿಯ ಆರಾಧನೆ ಯೋಗ್ಯವಾಗಿದೆ. ಪ್ರಕೃತಿಯು ಅಭಿವ್ಯಕ್ತ ರೂಪದಲ್ಲಿ ತ್ರಿಗುಣಾತ್ಮಿಕವಾಗಿದೆ. ತ್ರಿಗುಣದ ಪರಸ್ಪರ ಮಿಶ್ರಣದಿಂದ ತ್ರಿವೃತವಾಗಿ ಗುಣಗಳ ಸತ್ವ ಪ್ರಧಾನ ಸತ್ವ, ಸತ್ವ ಪ್ರಧಾನ ರಜ, ಸತ್ವ ಪ್ರಧಾನ ತಮ, ರಜ ಪ್ರಧಾನ ಸತ್ವ; ರಜ ಪ್ರಧಾನ ರಜ, ರಜ ಪ್ರಧಾನ ತಮ, ತಮ ಪ್ರಧಾನ ಸತ್ವ;·ತಮ ಪ್ರಧಾನ ರಜ, ತಮ ಪ್ರಧಾನ ತಮ ಈ ೯ ರೂಪಗಳಾಗಿವೆ. ಈ ಒಂಬತ್ತು ರೂಪಗಳ ಕಾರಣದಿಂದ ಪ್ರಕೃತಿ ಆರಾಧನೆಯು ಅಹೋರಾತ್ರವಾಗಿ ಪ್ರತಿಪದೆಯಿಂದ ನವಮಿಯ ತನಕ ನಡೆಯುತ್ತದೆ. ಕಾರಣ ಮೇಲೆ ಹೇಳಿದಂತೆ ಪ್ರಕೃತಿಯ ಸ್ವರೂಪವು ತ್ರಿವೃತ್‌ಕೃತ ತ್ರಿಗುಣಾತ್ಮಿಕವಾಗಿದೆ. ಆದ್ದರಿಂದಲೇ ಮಹಾಮಾಯಾ (ಪ್ರಕೃತಿ) ಉಪಾಸನೆಯ ಅಹೋರಾತ್ರಿಗಳಿಗೆ ಒಂಬತ್ತು ಸಂಖ್ಯೆಯನ್ನು ಕೊಟ್ಟಿದ್ದಾರೆ.

ಈ ಹಿಂದೆ ಹೇಳಿದ ವರ್ಷದ ೪೦ ನವರಾತ್ರಿಗಳಲ್ಲಿ ಎರಡು ನವರಾತ್ರಿಗಳಿಗೆ ವಿಜ್ಞಾನದೃಷ್ಟ್ಯಾ ಮಹತ್ತತೆ ಇದೆ. ಚೈತ್ರ ಹಾಗೂ ಆಶ್ವಯುಜ ಮಾಸದ ನವರಾತ್ರಿಗಳು ಮಹತ್ತತೆ ಪಡೆದಿದೆ.

ಜೀವನದ ಮೂಲಕಾರಣೀಭೂತರು ಅಗ್ನಿ ಮತ್ತು ಸೋಮ, ಅಗ್ನಿಯ ಧರ್ಮ ಉಷ್ಣವಾದರೆ ಸೋಮನದು ಶೀತವಾಗಿದೆ. ಅದಕ್ಕಾಗಿ ಅಗ್ನಿಯ ಗುಣಧರ್ಮವು ಚೈತ್ರದ ನವರಾತ್ರಿಯಿಂದ, ಸೋಮ ಗುಣಧರ್ಮವು ಆಶ್ವೀಜದಿಂದ ಆರಂಭವಾಗುತ್ತವೆ.

ಕೃಷಿ ಪ್ರಧಾನವಾದ ಭಾರತ ದೇಶದಲ್ಲಿ ಪ್ರಕೃತಿಯ ಕೊಡುಗೆಯಾದ ಅನ್ನದ ಉತ್ಪಾದನೆಯು ಈ ಎರಡೂ ನವರಾತ್ರಿಗಳಲ್ಲಿ ಆಗುತ್ತದೆ. · ಪ್ರಕೃತಿಯ ಮೂಲಕ ಕೊಡುಗೆಯನ್ನು ಪಡೆದು ಕೃತಜ್ಞತಾ ರೂಪದಲ್ಲಿ ಪ್ರಕೃತಿಯ ಆರಾಧನೆ ಮಾಡುವುದು ಉಚಿತವಾಗಿದೆ.

ವಸಂತ ಹಾಗೂ ಶರತ್ ಈ ಋತುಗಳು ಭಾರತ ವರ್ಷದ ಸ್ವಚ್ಛ -- ಸುಖದ ಋತುಗಳಾಗಿವೆ. ಹೀಗಾಗಿ ಭಾರತೀಯ ಕವಿಗಳು ಈ ಋತುಗಳ ಸವಿಯನ್ನು ಸವಿದು ತಮ್ಮ ಸಾಹಿತ್ಯದಲ್ಲಿ ಬಳಸಿಕೊಂಡಿರುತ್ತಾರೆ. ಪ್ರಕೃತಿಯ ಪ್ರಸನ್ನದ ಸನ್ನಿವೇಶದಲ್ಲಿ ಶಕ್ತಿ ಆರಾಧನೆಯು ಉಚಿತವಾಗಿದೆ.

ವಾಸ್ತವದಲ್ಲಿ ಶಕ್ತಿಯ ಹೊರತು ಏನು ಇಲ್ಲ. ಪ್ರತಿಯೊಂದೂ ವಸ್ತುವಿಗೆ ಸ್ವರೂಪ ಸ್ಥಿರವಾಗಿರಲು ಶಕ್ತಿಯೇ ಕಾರಣೀಭೂತಳು. ಶಕ್ತಿಯ ಹೊರತಾಗಿ ಯಾವದೊಂದು ವಸ್ತು ಕ್ಷಣವಾದರೂ ಉಳಿಯಲಾರದು ಹೆಚ್ಚೇಕೆ ಶಕ್ತಿಯಿಲ್ಲದೆ ಶಿವನು ಕೂಡ ಶವನಾಗಬಹುದು.

ಯಚ್ಚ ಕಿಂಚಿತ್ ಕ್ವಚಿದ್ವಸ್ತು
ಸದಸದ್ವಾಖಿಲಾತ್ಮಿಕೇ
ತಸ್ಯ ಸರ್ವಸ್ಯ ಯಾ ಶಕ್ತಿಃ
ಸಾ ತ್ವಂ ಕಿಂ ಸ್ತೂಯಸೇ ಮಯಾ

ದುರ್ಗಾ ಸಪ್ತಶತಿ ೧೮೨

“ಹೇ ಸರ್ವರೂಪಿಣಿ, ಜಗತ್ತಿನಲ್ಲಿರುವ ಯಾವುದೇ ಒಂದು ಚೇತನವಾಗಲಿ ಇನ್ನು ಅಚೇತನವಾದ ವಸ್ತುವಾಗಲೀ ಆ ವಸ್ತುಗಳಲ್ಲಿದ್ದ ಶಕ್ತಿಯು ನೀನೇ ಆಗಿರುವಿ. ಅಖಿಲಾತ್ಮಿಕೆ ಯಾದ ನಿನ್ನನ್ನು ನಾನು ಹೇಗೆ ಸ್ತೋತ್ರ ಮಾಡಲಿ”

ಈ ಕಿರಿದಾದ ಒಂದೇ ಶ್ಲೋಕದಲ್ಲಿ ಶಕ್ತಿಯ ಅನೇಕ ರೂಪಗಳನ್ನು ಹೇಳಿದೆ. ಅಖಿಲಾತ್ಮಿಕೆ ಸರ್ವಾತ್ಮಿಕೆ ಮೊದಲಾದ ಹೆಸರುಗಳನ್ನು ಪ್ರಕೃತಿ ಹೊಂದಿದ್ದಾಳೆ. ಪ್ರಕೃತಿ ತಾಯಿಯ ಹೊರತು ಏನನ್ನೂ ಬೇರೆ ಊಹಿಸುವುದು ಅಶಕ್ಯ

ದುರ್ಗಾ ಸಪ್ತಶತಿಯ ಮಧ್ಯಮ ಚರಿತ್ರೆಯಲ್ಲಿ ಎಲ್ಲ ದೇವತೆಗಳ ಅಂಶದಿಂದ ಆವಿರ್ಭೂತಗೊಂಡ ಶಕ್ತಿಯು ಮಹಿಷಾಸುರನಂಥ ವೀರಾಧಿವೀರ ದೈತ್ಯರನ್ನು ವಧಿಸಿದಳು. ಉತ್ತಮ ಚರಿತ್ರೆಯಲ್ಲಿ ಪ್ರಧಾನಶಕ್ತಿ ಹಾಗೂ ಉತ್ತಮಶಕ್ತಿಯ ಸಹಯೋಗದಿಂದ ಕಾರ್ಯವನ್ನು ಪೂರ್ಣಗೊಳಿಸಿದ್ದು ಸ್ಪಷ್ಟವಾಗಿದೆ.

ನವರಾತ್ರಿಯನ್ನು ಹಬ್ಬವಾಗಿ ಆಚರಿಸುವರು. ಕೆಲವರು ವ್ರತವೆಂದು ತಿಳಿದು ಆಚರಿಸುವರು. ನವರಾತ್ರಿಯ ದಿವಸಗಳಲ್ಲಿ ಪವಿತ್ರ ಮನದಿಂದ ದೇವಿಯನ್ನು ಆರಾಧಿಸಿ ದೇವಿಯಲ್ಲಿ ಮನವನ್ನು ಕೇಂದ್ರೀ





ಕರಿಸಿಕೊಂಡು ವ್ರತ ಆಚರಿಸುವಿಕೆಯು ಎಲ್ಲಕಲ್ಲಿ ಕಂಡುಬರುತ್ತದೆ. ಕನ್ನಡ ನಾಡಿನವರಿಗೆ ನವರಾತ್ರಿಯು ನಾಡಹಬ್ಬವಾಗಿದೆ.

ನವರಾತ್ರಿಯ ಆರಂಭದ ದಿವಸ ಘಟಸ್ಥಾಪನೆಯ ದಿವಸವಾಗಿದೆ. ಘಟವೂ ಜಲ, ವರುಣ ದೇವತೆಯ ಪ್ರತೀಕವಾಗಿದೆ. ಅಲ್ಲದೆ ಘಟಸ್ಥಾಪನೆಯಿಂದ ಲಕ್ಷ್ಮೀಶಾರದೆಯಾದಿ ದೇವತಾಸಾನ್ನಿಧ್ಯ ಲಾಭವುಂಟಾಗುತ್ತದೆ. ಪಂಚಮಿಯಿಂದ ಪಂಚರಾತ್ರೋತ್ಸವವೂ ಆರಂಭವಾಗುತ್ತದೆ. ಪಂಚಮಿಯಂದು ಲಲಿತಾದೇವಿಯ ಪೂಜೆ ಮಾಡುವರು. ಮೂಲಾ ನಕ್ಷತ್ರದಲ್ಲಿ ಸರಸ್ವತಿಯ ಆವಾಹನವಾಗುತ್ತದೆ. ಪೂರ್ವಾಷಾಢಾದಲ್ಲಿ ಶಾರದೆಯ ಪೂಜೆ ಉತ್ತರಾಷಾಢಾದಲ್ಲಿ ಬಲಿ ಎಂದೂ ಶ್ರವಣದಲ್ಲಿ ವಿಸರ್ಜನೆಯಿದೆ. ಸಪ್ತಮೀಯಿಂದ ತ್ರಿರಾತ್ರೋತ್ಸವವು, ಮಹಾನವಮೀ ಏಕರಾತ್ರೋತ್ಸವ ಆಗುತ್ತದೆ. ಅಷ್ಟಮೀ ದುರ್ಗಾಷ್ಟಮೀಯಾಗಿದ್ದು ಮಹಾಷ್ಟಮೀ ಎನಿಸಿದೆ. ನವಮೀ ಮಹಾನವಮೀ ದೇವಿಗೆ ಬಲಿದಾನ, ವಿಜಯದಶಮೀ ದಿವಸ ವಿಜಯೋತ್ಸವ ಅಶ್ವಪೂಜಾ ಸೀಮೋಲ್ಲಂಘನ ಅಪರಾಜಿತಾ ಶಮೀ ಪೂಜನ ಹೇಳಿದೆ. ದಶಮೀ ದಿವಸ ಮಧ್ಯಾಹ್ನ ೨ ರಿಂದ ೩ ಘಂಟೆ ಒಳಗಿನ ೪೮ ಪಳಗಳು ವಿಜಯಮುಹೂರ್ತವಾಗಿದೆ. ಶ್ರೀರಾಮಚಂದ್ರ ಪ್ರಭುವು ವಿಜಯದಶಮೀ ದಿವಸ ಲಂಕಾವಿಜಯಕ್ಕೆ ಪ್ರಸ್ಥಾನ ಮಾಡಿದ್ದನು. ಅಲ್ಲದೆ ಸುತ್ತಲಿನ ಸುಮನೋಹರ ಪರಿಹರವು ದಿಗ್ವಿಜಯ ಯಾತ್ರೆ ಮಾಡಲು ಪ್ರೇರೇಪಿಸುವುದರಿಂದ ವಿಜಯದಶಮೀ ಮುಹೂರ್ತದಲ್ಲಿ ದಿಗ್ವಿಜಯ ಯಾತ್ರೆ ಮಾಡತಕ್ಕದ್ದು.

ಎರಡನೆಯ ಶತಮಾನದಲ್ಲಿ ಕರ್ನಾಟಕವನ್ನಾಳಿದ ಶಾತವಾಹನರ ಕಾಲದಲ್ಲಿ ದಸರೆಯ ಹಬ್ಬ ಅರ್ಥಾತ್ ನವರಾತ್ರ್ಯೋತ್ಸವವನ್ನು ಆಚರಿಸುತ್ತಿದ್ದರು. ಸಮೃದ್ಧಿ ಸಂಪತ್ತಿಗಾಗಿ ಮಣ್ಣನ್ನು ಪೂಜಿಸುತ್ತಿದ್ದರು. ಆ ಮೇಲೆ ವಿಜಯನಗರದರಸರ ಕಾಲದಲ್ಲಿ ನವರಾತ್ರ್ಯೋತ್ಸವವು ವಿಶ್ವಖ್ಯಾತಿಯುನ್ನು ಪಡೆಯಿತು. ೧೫೧೩ ರಲ್ಲಿ ಒರಿಸ್ಸಾವನ್ನು ಗೆದ್ದ ಸಿಹಿನೆನಪಿಗಾಗಿ ಕೃಷ್ಣದೇವರಾಯನು ನಿರ್ಮಿಸಿದ ಸೌಧವೇ ಮಹಾನವಮೀ ದಿಬ್ಬವಾಗಿದೆ. ಎಲ್ಲಕ್ಕಿಂತ ಎತ್ತರವಾಗಿದ್ದು ವಿಜಯ ಸೂಚಕದ ಮಾರ್ನೌಮಿ ದಿಬ್ಬವೆಂದು ಅಬ್ದುಲ್ ರಜಾಕನು ಬರೆದಿದ್ದಾನೆ. ಇಂದು ಈ ಸೌಧವು ಇತಿಹಾಸದ ಗತವೈಭವಕ್ಕೆ ಮೂಲಸಾಕ್ಷಿಯನ್ನು ಕೊಡುತ್ತದೆ.



ಒಟ್ಟಿನಲ್ಲಿ ನಾಡಹಬ್ಬವಾದ ನವರಾತ್ರಿಯು ನಮ್ಮ ಅಂತರಂಗದಲ್ಲಿಯು ತಮೋ ರಜೋಗುಣಗಳ ವಿರುದ್ಧ ಸತ್ವಗುಣವ ವಿಜಯವಾಗಿದೆ. ಇಂದಿನ ಅಶಾಂತ ಪರಿಸ್ಥಿತಿಯಲ್ಲಿ ನವರಾತ್ರಿ -- ದಸರೆಯ ಹಬ್ಬವು ಯೋಗ್ಯ ಸಂದೇಶವನ್ನು ಕೊಡುತ್ತದೆ. ವಿಜಯದಶಮೀ ದೇಶೀತರದ ಬನ್ನಿ ಬಂಗಾರ ಹಂಚುವಿಕೆಯ ಹಿನ್ನೆಲೆಯ ಬನ್ನಿಯನ್ನು ಪರಸ್ಪರ ಪಡೆಯುತ್ತ ಬಂಗಾರದಂತೆ ಇರೋಣ ಎಂಬ ಉನ್ನತ ತತ್ವದ ಸಂಕೇತವಾಗಿದೆ. ದ್ವೇಷ ಅಸೂಯೆ ಮರೆತುಕೊಂಡು ಸಂಭ್ರಮ ಆನಂದ ಸಂತೃಪ್ತಿಯಿಂದ ಇದ್ದು ದೇವಿ ಆರಾಧನೆಯ ಮಾಡುತ್ತ ದೇವಿಯಲ್ಲಿ ಕೇಂದ್ರೀಕರಿಸುವ ತತ್ವವನ್ನು ದುರ್ಗಾ ನವರಾತ್ರಿಯು ಪ್ರತಿಬಿಂಬಿಸುತ್ತದೆ.



# ಬೇಡಿಕೆ

---ಜಿ. ಎಸ್. ಗುಂಡಪ್ಪ.



ಶ್ರೀನಿವಾಸನೆ ವೆಂಕಟೇಶನೆ
ಪದ್ಮನಾಭನೆ ಜಯ ಜಯ
ಹೇ ಮುಕುಂದನೆ ನಾರಸಿಂಹನೆ
ತಿರುಮಲೇಶನೆ ಜಯ ಜಯ || ೧ ||

ವಾಸುದೇವನೆ ರಾಮಚಂದ್ರನೆ
ಲಕ್ಷ್ಮಿನಾಥನೆ ಜಯ ಜಯ
ನಿನ್ನ ನಾಮವ ಜಪಿಸುತಿದ್ದರೆ
ನಮಗೆ ಸರ್ವದ ನಿರ್ಭಯ || ೨ ||

ನೀನೆ ಬ್ರಹ್ಮನು ನೀನೆ ವಿಷ್ಣುವು
ನೀನೆ ಗಣಪತಿ ರುದ್ರನು
ಕೋಟಿ ಕೋಟಿ ವಿಶ್ವಗಳಿಗೆ
ನೀನೆ ಆಗಿಹೆ ನಾಥನು || ೩ ||

ಸಪ್ತಗಿರಿಯಲಿ ಭಕ್ತಮಂದಿಗೆ
ಮೂರ್ತಿರೂಪದಿ ನೆಲೆಸಿಹೆ
ಸುಪ್ತರೂಪದ ಶಕ್ತಿಯೊಂದಿಗೆ
ಗುಪ್ತವಾಗಿಯೆ ಅಲ್ಲಿಹೆ || ೪ ||

ದೂರದೂರದ ಭಕ್ತರನ್ನು
ಸಪ್ತಗಿರಿಗೆ ಸೆಳೆಯುವೆ
ಭಕ್ತಮಂದಿಗೆ ಹರುಷ ನೀಡಿ
ಕಷ್ಟವೆಲ್ಲವ ಕಳೆಯುವೆ || ೫ ||

ಕೋಟಿ ಸೂರ್ಯರ ತೇಜ ಪಡೆದಿಹ
ದೇವ ನಿನಗೆ ಜಯ ಜಯ
ನಿನ್ನ ಲಮಿತ ಭಕ್ತಿ ಇದ್ದರೆ
ನಮ್ಮ ಕೆಲಸದಿ ಜಯ ಜಯ || ೬ ||

ಹೇ ಅನಂತನೆ ಜಾನಕೀಶನೆ
ಗೋವಿಂದನೆ ಜಯ ಜಯ
ಅಪ್ರಮೇಯನೆ ಚಕ್ರಪಾಣಿಯೆ
ಕಮಲ ನಾಥನೆ ಜಯ ಜಯ || ೭ ||

ಪವವಿ ಬಯಸೆನು ಕೀರ್ತಿ ಬಯಸೆನು
ಭಕ್ತಿಯೊಂದನೆ ಬಯಸುವೆ
ನಿನ್ನ ಮೇಲಿನ ನನ್ನ ಭಕ್ತಿಯ
ಇನ್ನು ಹೆಚ್ಚಿಸೆ ಬೇಡುವೆ || ೮ ||

ಆದಿ ಅಂತ್ಯವು ಇಲ್ಲದಾತನೆ
ನಿನಗೆ ಸರ್ವದ ಜಯ ಜಯ
ನಿನಗೆ ಜಯವು ಎಂಬ ನನ್ನ
ನುಡಿಯ ಕೇಳಿನಗುವೆಯ ! || ೯ ||

ಬತ್ತಿ ದೀಪವು ಸೂರ್ಯದೇವಗೆ
ಜಯವ ಬಯಸುವ ಪರಿಯೊಳು
ಭಕ್ತ ಮಂದಿಯು ನಿನಗೆ ಜಯವ
ಬಯಸಿ ನುತಿಪರು ಧರೆಯೊಳು || ೧೦ ||

ನಿನ್ನ ಸೃಷ್ಟಿಲಿ ಅಲ್ಪಸ್ವಲ್ಪದ
ಲೋಪ ಮನುಜರು ಕಂಡರು
ನಿನ್ನ ಅದ್ಭುತ ವಿಶ್ವಯಂತ್ರವ
ಕಂಡು ಬೆರಗನು ಪಡೆವರು || ೧೧ ||

ಆಹ! ಧರೆಯಲಿ ನಿತ್ಯ ಸುಖಿಗಳು
ನಿನ್ನ ಪರಮ ಭಕ್ತರು!
ಚಿಂತೆಮಾಡದೆ ಧೈರ್ಯದಿರುವರು
ಏನೆ ಕಷ್ಟವು ಬಂದರು! || ೧೨ ||

ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ.ತಿ.ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ : ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ : ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ.

ವಿಗ್ರಹಗಳು : ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ.

ಆಳ್ವಾರ್‌ಗಳು : ವಿಶಿಷ್ಟಾದ್ವೈತ ತತ್ತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು : ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ : ಹರಿದಾಸರ ಹಿರಿಮೆಯನ್ನೂ; ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ೮ನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.

---

**ಕಾಲ : ಬೆಳಗ್ಗೆ ೮ ರಿಂದ**
**ರಾತ್ರಿ ೮ ರ ವರೆಗೆ**

**ಟಿಕೆಟ್ ರೂ. ೧--೦೦ (ಹಿರಿಯರಿಗೆ)**
**„ „ ೦--೫೦ (ಕಿರಿಯರಿಗೆ)**

# ಶ್ರೀ ವೈಷ್ಣವತ್ವ ಹಾಗೂ ವಿಶಿಷ್ಟಾದ್ವೈತಸಾರ

---ಕೆ. ವಿ. ಶ್ರೀನಾಥ್.

ಮಾನವನ ಬುದ್ಧಿಯ ಹಾಗೂ ಮನಸ್ಸಿನ ಕತ್ತಲೆಯನ್ನು ಹೋಗಲಾಡಿಸಿ ಅವನು ಸಂಪೂರ್ಣ ವಿಕಾಸವನ್ನು ಜ್ಞಾನಮಾರ್ಗದಲ್ಲಿ ಸಾಧಿಸುವ ಸಲುವಾಗಿ ಅವನಿಗೆ ಮಾರ್ಗದರ್ಶನ ಮಾಡಲೋಸುಗ, ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆ ದೇಶಗಳಲ್ಲಿ ಆಯಾ ಜನಗಳ ಪೂರ್ವಪುಣ್ಯದಿಂದ ಈಶ್ವರನನ್ನು ಅರಿಯುವ ವಿದ್ಯೆಗಳ ಜ್ಞಾನವು ಋಷಿಗಳಿಗೆ, ಯೋಗಿಗಳಿಗೆ, ಮಹಾತ್ಮರಿಗೆ, ಆಳ್ವಾರರಿಗೆ ಗೋಚರವಾಯಿತು. ಇವರಲ್ಲಿ ಅತ್ಯಂತ ಪುರಾತನರಾದ ಋಷಿಗಳು ದಿವ್ಯದೃಷ್ಟಿಯಿಂದ, ತಪಶ್ಶಕ್ತಿಯಿಂದ, ಅಲೌಕಿಕ ಸಮಾಧಿಯಿಂದ ದೈವಿಕ ಸತ್ಯವನ್ನು ಸಾಕ್ಷಾತ್ಕರಿಸಿಕೊಂಡರು. ತಮ್ಮ ಆ ಅನುಭವದ ಸಾರವನ್ನು ತಮ್ಮ ದಿನ ನಿತ್ಯ ವ್ಯವಹಾರದಲ್ಲಿ ಆಗಿನ ಕಾಲದಲ್ಲಿ ಬಳಸುತ್ತಿದ್ದ ವೈದಿಕ ಸಂಸ್ಕೃತ ಭಾಷೆಯಲ್ಲಿ ಮಂತ್ರಗಳ ರಾಶಿಯಲ್ಲಿ ಅಡಗಿಸಿಟ್ಟು ಮಹೋನ್ನತ ಕಾರ್ಯ ಮಾಡಿದರು.

ವಿಶ್ವದ ಇತರ ಭಾಗಗಳಲ್ಲಿ ನಾಗರಿಕತೆಯ ಸೋಂಕು ತಟ್ಟುವ ಮುಂಚೆಯೇ ನಮ್ಮ ಬಾರತದ ಋಷಿಗಳು ಭವ್ಯವಾದ ಜೀವನ ದರ್ಶನ ಕಂಡಿದ್ದರು. ಇದಕ್ಕೆ ವೇದ ಸೂಕ್ತಿಗಳು ಸಾಕ್ಷಿಯಾಗಿ ಇಂದಿಗೂ ಜೀವಂತವಾಗಿದೆ. ಇವನ್ನು ಬರೆದಿಡದೆ ಗುರುಗಳ ಬಾಯಿನಿಂದ ಶಿಷ್ಯರ ಕಿವಿಗಳ ಮೂಲಕ ಮುಂದಿನ ತಲೆಮಾರಿಗೆ ಸಾಗಿಸುತ್ತ ಬಂದದ್ದರಿಂದ ಇವುಗಳಿಗೆ ಶ್ರುತಿ ಎಂಬ ಹೆಸರು ಬಂದಿದೆ.

ಈ ವೇದಗಳಲ್ಲಿ ತತ್ವ -- ವ್ಯವಹಾರ ಎರಡೂ ಇವೆ. ಪ್ರಪಂಚ, ಜೀವಾತ್ಮ ಪರಮಾತ್ಮ ಈ ಮೂರರ ಬಗ್ಗೆ, ಇವುಗಳ ಮಧ್ಯೆ ಇರುವ ಸಂಬಂಧಗಳ ಬಗ್ಗೆ, ಮೋಕ್ಷಸಾಧನೆಯ ಬಗ್ಗೆ, ವೇದಗಳಿಂದ ತಿಳಿದು ಬರುತ್ತದೆ.

ಪರಮಾತ್ಮನ ಪ್ರಧಾನವಾದ ಹೆಸರು 'ಓಂ'. ಸಕಲ ಜೀವರಿಗೂ ನಿವಾಸಸ್ಥಾನವಾಗಿರುವ ಕಾರಣ ನಾರಾಯಣ. ಜಗತ್ತಿನ ಹುಟ್ಟಿಗೆ ಕಾರಣನಾದುದರಿಂದ ಬ್ರಹ್ಮ. ಸರ್ವತ್ರ ವ್ಯಾಪಿಸಿರುವುದರಿಂದ ವಿಷ್ಣು. ದುಷ್ಟರನ್ನು ದಂಡಿಸಿ ಅಳಿಸಿರುವುದರಿಂದ ರುದ್ರ. ಸಮರ್ಥನಾದುದರಿಂದ ಈಶ್ವರ.

ಇಂಥಹ ಭಗವಂತನ ಸಾಕ್ಷಾತ್ಕಾರವಾಗಬೇಕೆಂದರೆ ತ್ರಿಕರಣಶುದ್ಧ ಮನಸ್ಕನಾಗಿ, ಸ್ವಾರ್ಥರಹಿತ ನಿಷ್ಕಾಮ ಭಾವದಿಂದ ಉಪಾಸನೆ, ಪೂಜೆ, ಸ್ತುತಿ, ಪ್ರಾರ್ಥನೆಗಳನ್ನು ಮಾಡಬೇಕು.

ಇವೇ ನಮ್ಮ ಋಷಿಗಳ ಆಳ್ವಾರರ ಮೂಲೋದ್ದೇಶವಾಗಿದ್ದವು. ಇವರಲ್ಲಿ ಆಳ್ವಾರರ ಭಕ್ತಿ ಶ್ಲೋಕಗಳೇ ದಿವ್ಯಪ್ರಬಂಧಗಳೆನಿಸಿ ಶ್ರೀ ವೈಷ್ಣವತ್ವದ ಸಿದ್ಧಾಂತಕ್ಕೆ ಹಾದಿಮಾಡಿಕೊಟ್ಟವು. ಆಗಮಗಳ ಮೂಲಕ ಜೀವಂತವಾಗಿದ್ದ ಶ್ರೀ ವೈಷ್ಣವತ್ವವು ಒಂದು ನಿಖರವಾದ ರೂಪುರೇಷೆ ಪಡೆಯಲು ಈ ತಮ್ಮ ದಿವ್ಯ ಪ್ರಬಂಧಗಳು ಸಹಾಯಕವಾದವು. ಮುಂದೆ ಇವೇ ಭಗವದ್ ರಾಮಾನುಜರಂಥಹ ಶ್ರೇಷ್ಠಜ್ಞಾನಿಗಳಿಗೆ ವಿಶಿಷ್ಟಾದ್ವೈತ ಸಿದ್ಧಾಂತವನ್ನು ರೂಪಿಸುವುದಕ್ಕೆ ಮಾರ್ಗದರ್ಶಿಗಳಾದವು.

ಶ್ರೀ ವೈಷ್ಣವತ್ವವು ಇಂದು ವಿಶಿಷ್ಟಾದ್ವೈತವೆಂದು ಪರಿಗಣಿಸಲ್ಪಟ್ಟಿದೆ. ವೈಷ್ಣವರು ವಿಶಿಷ್ಟಾದ್ವೈತಿಗಳೆಂದು ಕರೆಸಿಕೊಂಡಿದ್ದಾರೆ.

ಪರಮ ಪ್ರಾಪ್ಯನಾದ ಬ್ರಹ್ಮಸ್ವರೂಪ, ಪರಮಾತ್ಮನಿಗೆ ಶೇಷಭೂತನಾದ ಜೀವನ ಸ್ವರೂಪ, ಪರಮಾತ್ಮ ಪ್ರಾಪ್ತಿಗೆ ಉಪಾಯ ಸ್ವರೂಪ, ಪರಮಾತ್ಮನನ್ನು ಹೊಂದಿ ಅನುಭವಿಸುವ ಫಲದ ಸ್ವರೂಪ. ಪರಮಾತ್ಮನ ಪ್ರಾಪ್ತಿಗೆ ಪ್ರತಿಬಂಧಕವಾಗಿರುವ ವಿರೋಧ ಸ್ವರೂಪ ಎಂಬೀ ಅರ್ಥಪಂಚಕವನ್ನು ಅರಿತು ಪೂಜಿಸುವವರು, ಪಂಚಸಂಸ್ಕಾರಗಳನ್ನು ಹೊಂದಿ, ಪಂಚಕಾಲ ನಿತ್ಯಕರ್ಮವನ್ನು ಮಾಡುವ ವಿಷ್ಣುಭಕ್ತರು. ಶ್ರೀಮನ್ನಾರಾಯಣನ ಪಂಚರೂಪವನ್ನು ನಂಬಿ ಉಪಾಸಿಸುವರು. ಭಗವತ್ಕೃಪೆ, ಭಗವತ್ಪ್ರಾಪ್ತಿ, ಶ್ರೀ ಮಹಾಲಕ್ಷ್ಮಿಯ ಸ್ಥಾನ. ಪುಂಡ್ರಧಾರಣೆಯ ಆಕಾರ, ಮಂತ್ರೋಪದೇಶ, ಪ್ರಾಯಶ್ಚಿತ್ತ, ಪ್ರಪತ್ತಿ, ಯುಕ್ತಿಯ ನಂತರ ಜೀವಾತ್ಮರುಗಳ ಸ್ಥಾನ, ಮುಂತಾದ ಹದಿನೆಂಟು ವಿಷಯಗಳಲ್ಲಿ ಉಂಟಾದ ಮೂಲಭೂತ ವ್ಯತ್ಯಾಸಗಳಿಂದಾಗಿ ಶ್ರೀವೈಷ್ಣವವು ಎರಡು ಸಂಪ್ರದಾಯಗಳಾಗಿ ಬೆಳೆದು ತೆಂಗಲೆ ಮತ್ತು ವಡಗಲೆ ಎಂದು ಹೆಸರು ಗೊಂಡರೂ ಅವರ ಮೂಲ ಉದ್ದೇಶ ಒಂದೇ ಆಗಿದೆ.

ಭಗವದ್ ರಾಮಾನುಜರು ಶ್ರೀವೈಷ್ಣವತ್ವದ ಮೂಲ ಪುರುಷರಲ್ಲದಿದ್ದರೂ ಶ್ರೀವೈಷ್ಣವ ಸಿದ್ಧಾಂತವನ್ನು ಜನಪ್ರಿಯಗೊಳಿಸಲು ಬಹಳವಾಗಿ ಶ್ರಮಿಸಿದರು. ಪೀಠಾಧಿಪತಿಗಳು, ಜೀಯರುಗಳು,



ಏಕಾಂತಿಗಳು, ಅಮ್ಮೆಗಳ ಸಾಲನ್ನು ಏರ್ಪಡಿಸಿದ್ದೇ ಅಲ್ಲದೆ ಸ್ವಯಮಾಚಾರ್ಯ ಪುರುಷ ಪದ್ಧತಿಯನ್ನು ಏರ್ಪಾಡು ಮಾಡಿದರು. ಇವರೆಲ್ಲ ಪರಂಪರಾಗತವಾದ ಸಂಪ್ರದಾಯ ನಿಷ್ಠರೂ, ಸದಾಚಾರ ಸಂಪನ್ನರೂ, ತತ್ವಜ್ಞಾನಿಗಳೂ, ವಿವೇಕಿಗಳೂ, ದೈವಭಕ್ತರೂ ಆಗಿದ್ದರು. ಇವರಿಗೆ ಪಂಚ ಸಂಸ್ಕಾರ ಮತ್ತು ಗ್ರಂಥಗಳ ಕಾಲಕ್ಷೇಪ ಮಾಡುವ ಅಧಿಕಾರವನ್ನು ವಂಶಪಾರಂಪರ್ಯವಾಗಿ ಕೊಡಲ್ಪಟ್ಟಿತು.

ವಿಶಿಷ್ಟವಾದ ಧರ್ಮವಾಗಿದ್ದ ಶ್ರೀವೈಷ್ಣವ ಧರ್ಮವನ್ನು ಲೋಕಕ್ಕೆ ಸಾರಲೆಂದೇ ಅವತರಿಸಿದ್ದ ಭಗವದ್ ರಾಮಾನುಜರಿಗೆ ಕಂಚಿಯ ಶ್ರೀ ವರದ ರಾಜಸ್ವಾಮಿಯು ತಿರುಕ್ಕಚ್ಚಿ ನಂಬಿ ಯವರ ಮೂಲಕ ಆ ವಿಶಿಷ್ಟ ಧರ್ಮವಾದ ವಿಶಿಷ್ಟಾದ್ವೈತದ ಮುಖ್ಯ ಅಂಶಗಳನ್ನು ದೋಧಿಸಿದರು :

1. "ಅಹಮೇವ ಪರಂ ತತ್ವಮ್"

--ಸಕಲ ಗುಣ ಪರಿಪೂರ್ಣನಾದ ಶ್ರೀಮನ್ ನಾರಾಯಣನು ಪರತತ್ವ. ಜ್ಞಾನಿಗಳು, ಭಕ್ತರು ತಿಳಿಯದೇಕಾದ ಪರಬ್ರಹ್ಮವಸ್ತು.

2. "ದರ್ಶನಂ ಭೇದಮೇವ ಚ"

--ಭೇದ ದರ್ಶನವೇ ಪ್ರಾಮಾಣಿಕವಾದುದು.

3. "ಉಪಾಯಸ್ತು ಪ್ರಪತ್ತಿಸ್ಸ್ಯಾತ್"

-- ಉಪಾಯವು ಶರಣಾಗತಿಯೇ ಆಗುವುದು.

4. "ಅಂತಿಮ ಸ್ಮೃತಿ ವರ್ಜನಂ"

--ಅಂತ್ಯ ಕಾಲದಲ್ಲಿ ಅಂತಿಮ ಸ್ಮೃತಿಯ ಅವಶ್ಯಕತೆ ಇಲ್ಲ.

5. "ದೇಹಾವಸಾನೇ ಮೋಕ್ಷಂ ಚ "

--ದೇಹವು ಬಿದ್ದುಹೋದಮೇಲೆ ಮೋಕ್ಷ.

ಭಗವದ್ರಾಮಾನುಜರು ತಮಗಿಂತ ಮೊದಲೇ ಪ್ರಚಾರದಲ್ಲಿದ್ದ ಶ್ರೀವೈಷ್ಣವ ಸಂಪ್ರದಾಯವನ್ನು ಯಾಮುನಾಚಾರ್ಯರ ಅಂತಿಮೇಚ್ಛೆಯಂತೆ ಶಾಸ್ತ್ರ ಅಥವ ಸಿದ್ಧಾಂತದ ಮಟ್ಟಕ್ಕೆ ಏರಿಸಿ ಅದನ್ನು 'ವಿಶಿಷ್ಟಾದ್ವೈತ'ವೆಂದು ಕರೆದು ಒಂದು ಗಣ್ಯವಾದ ಸ್ಥಾನವನ್ನು ತಂದುಕೊಟ್ಟರು.

ದಿವ್ಯ ಪ್ರಬಂಧಗಳ ಬಗ್ಗೆಯೂ, ವೇದಗಳ ಬಗ್ಗೆಯೂ ರಾಮಾನುಜರಿಗೆ ಅಪಾರ ಜ್ಞಾನ -- ಪ್ರೇಮಗೌರವಗಳು. ವೈದಿಕ ಪ್ರಮಾಣಗಳಿಗೆ ಸಂಸ್ಕೃತ ಮೂಲವನ್ನು ಶೋಧಿಸಿ, ಬಳಸಿ ವಿಶಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

## ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ. 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ. 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

ಷ್ಟಾದ್ವೈತ ಸಾರವನ್ನು ಸಂಗ್ರಹಿಸಿ, ಸಂಸ್ಕರಿಸಿ, ಸ್ಥಿರೀಕರಿಸಿ, ಪ್ರಚಾರಮಾಡಿದ ಹಾಗೆ, ದಿವ್ಯಪ್ರಬಂಧಗಳಿಗೂ ಅಪೂರ್ವವಾದ ಅರ್ಥವಿವರಣೆ ನೀಡಿ ಪಿಳ್ಳಾ ರವರಿಂದ ವ್ಯಾಖ್ಯಾನವನ್ನು ಬರೆಸಿದರು. ಹಾಗೆಯೇ ಅದ್ವೈತಕ್ಕಿಂತ ಭಿನ್ನವಾದ ವಿಶಿಷ್ಟಾದ್ವೈತವನ್ನು ಮಂಡಿಸುವ ಭಾಷ್ಯಗಳನ್ನು ರಚಿಸಿ ಭಾಷ್ಯಕಾರರೆನಿಸಿಕೊಂಡರು.

ಆಳ್ವಾರರುಗಳು ತಮ್ಮ ದಿವ್ಯ ಪ್ರಬಂಧಗಳಲ್ಲಿ ವಿಷ್ಣುವಿನ ಸರ್ವೋತ್ತಮತ್ವವನ್ನು ಕುರಿತು ಹಾಡಿದ್ದರು. ಅವು ಕಾಲಾನಂತರದಲ್ಲಿ ಜನಸಂಪರ್ಕ ಕಳೆದುಕೊಂಡಾಗ ನಾಥಮುನಿಗಳು ಭಗವಂತನ ಅನುಗ್ರಹದಿಂದ ಅವುಗಳನ್ನು ಮತ್ತೆ ಸಂಗ್ರಹಿಸಿ ನಾಲ್ಕು ಸಹಸ್ರಗಾಹೆಗಳ ಗುಂಪಾಗಿ ವಿಂಗಡಿಸಿ ಗ್ರಂಥರೂಪಕ್ಕಿಳಿಸಿದರು. ಇವರ ಮೊಮ್ಮಕ್ಕಳೇ ಯಾಮುನಾಚಾರ್ಯರು. ಇವರು ಶ್ರೀ ರಾಮಾನುಜಾಚಾರ್ಯರ ಪರೋಕ್ಷಗುರುಗಳು. ಶ್ರೀ ವೈಷ್ಣವ ಸಿದ್ಧಾತವನ್ನು ಜಗತ್ತಿಗೆ ಸಾರಿದ ರಾಮಾನುಜರು ತಮ್ಮ ಗುರುಗಳಿಗೆ ನೀಡಿದ ವಚನದಂತೆ ಆಳ್ವಾರರುಗಳ ಗ್ರಂಥಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿ ಅವುಗಳನ್ನು ಪ್ರಚಾರಪಡಿಸಿದರು.

ಭಗವದ್ ರಾಮಾನುಜರು ಪ್ರಮಾಣಿಸಿ ಮಾಡಿದ ಸಾಕಾರ ಮತ್ತು ನಿರಾಕಾರ ಭಗವತ್ ತತ್ವದ ಸಿದ್ಧಾಂತಗಳ ಸಮನ್ವಯವೇ ನಿಜವಾದ ಮಾರ್ಗವಾದ ವಿಶಿಷ್ಟಾದ್ವೈತ ಸಿದ್ಧಾಂತ.

ಭಗವಂತನ ಸಾಕ್ಷಾತ್ಕಾರವೇ ಈ ಜೀವನದ ಪರಮಗುರಿ. ಭಗವಂತನ ಸೇವೆಗೆ ಅದು ಮೀಸಲು, ಮನುಷ್ಯನ ರಕ್ಷಕ ದೇವರು. ಈ ದೇವರನ್ನು ತನ್ನ ಒಡೆಯನು ಎಂಬ ಪ್ರಪತ್ತಿ ಭಾವನೆಯಿಂದ ಪೂಜಿಸಬೇಕು.

ದೇಹ ಅಸತ್ಯ ಜೀವ ನಿತ್ಯ. ಭಗವಂತನೇ ಹುಟ್ಟು ಸಾವುಗಳಿಗೆ ಸ್ವಾಮಿ. ಇಂಥ ಸ್ವಾಮಿಯನ್ನು ಪ್ರೇಮಭಕ್ತಿಗಳಿಂದ ಆರಾಧಿಸಿದರೂ ಒಲಿಯುತ್ತಾನೆ. ಪ್ರಪನ್ನನಾಗಿ ಶರಣುಹೋದರೂ ಅವನು ಉದ್ಧರಿಸುತ್ತಾನೆ.

ಶ್ರೀಮನ್ನಾರಾಯಣನೇ ಪರತತ್ವ. ಅವನ ಪಾದಾರವಿಂದಗಳಲ್ಲಿ ಪ್ರಪತ್ತಿ ಮಾಡುವುದೇ ಪರಮಹಿತ. ಅವನ ಕೈಂಕರ್ಯವೇ ಪರಮ ಪುರುಷಾರ್ಥ ಎಂಬುದಾಗಿ ವಿಶಿಷ್ಟಾದ್ವೈತ ಸಿದ್ಧಾಂತ ಹೇಳುವುದು. ಈ ಮತದಲ್ಲಿ ಮುಖ್ಯವಾಗಿ ಇರುವ ವಿಭಾಗಗಳು ಎರಡು.

ಮೊದಲನೆಯದು ಪ್ರಮೇಯ. ಎರಡನೆಯದು ಪ್ರಮಾಣ. ಒಂದು ಜ್ಞಾನದ ವಸ್ತು. ಇನ್ನೊಂದು ಜ್ಞಾನದ ಸಾಧನ.

ಶ್ರೀ ವೈಷ್ಣವತ್ವದಲ್ಲಿ ಶ್ರೀ ವಿಷ್ಣುಕೃಪೆಯೇ ಮುಖ್ಯವೆಂಬ ಬಲವಾದ ನಂಬಿಕೆ ಹಾಗೂ ಸರ್ವಪೂಜೆಯೂ ಅವನಿಗೇನೇ ಮೀಸಲು. ಅವನ ಕೃಪೆ ನಿರ್ಹೇತುಕವಾಗಿ ಪುರುಷಾರ್ಥ ಕೊಡುತ್ತದೆ. ಮಾರ್ಜಾಲ ಕಿಶೋರ ನ್ಯಾಯದಂತೆ ಭಗವದನುಗ್ರಹಕ್ಕೆ ಭಕ್ತನು ಆಚಾರ್ಯರಲ್ಲಿ ಪ್ರಪತ್ತಿ ಮಾಡಿದರೆ ಸಾಕು. ಮೋಕ್ಷದಾಹಿಗೆ ದೇವರ ಸೇವೆ, ಕೈಂಕರ್ಯಾನುಷ್ಠಾನ ಸಾಕು. ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿಗಳಲ್ಲಿ ಮೋಕ್ಷಸಾಧನೆಗೆ ಮುಖ್ಯವಾದುದು ಪ್ರಪತ್ತಿ ಮಾರ್ಗ. ಆಚಾರ್ಯರ ಮೂಲಕ ಮತ್ತು ಭಾಗವತರ ಮೂಲಕ ಅವರ ಜೊತೆಯಲ್ಲಿ ದೇವರಲ್ಲಿ ಪ್ರಪತ್ತಿ ಮಾಡಬೇಕು. ಪ್ರಪನ್ನನು ಈ ಮಾರ್ಗದಲ್ಲಿ ನಡೆದಾಗ ಮಾತ್ರ ಅವನಿಗೆ ಭಗವದನುಗ್ರಹ ಲಭಿಸುವುದು. ನಿತ್ಯನೈಮಿತ್ತಿಕ ಕರ್ಮಗಳನ್ನು ತ್ಯಜಿಸಿದಾಗ ಅವನಿಗೆ ಪ್ರಪತ್ತಿ ಫಲಿಸುತ್ತದೆ. ಪ್ರಪನ್ನನು ವರ್ಣಾಶ್ರಮ ಧರ್ಮವನ್ನು ತ್ಯಾಗ ಮಾಡುವ ಮೂಲಕ ಭಗವಂತನ ಪ್ರೀತಿಗೆ ಒಳಗಾಗಬಹುದು. ಆಚಾರ್ಯ -- ಭಾಗವತ ಶರಣಾಗತಿಯ ಮೂಲಕ ಭಗವಂತನ ದಯೆಗೆ ಪಾತ್ರನಾಗಿರುವ ಕಾರಣ ಧರ್ಮಶಾಸ್ತ್ರಗಳ ಒತ್ತಡ ಪ್ರಪನ್ನನಿಗೆ ಅನ್ವಯಿಸುವುದಿಲ್ಲ. ಪ್ರಪನ್ನನು ಮೊದಲು ಯಾವ ಜಾತಿಯವನಾದರೂ ಅವನು ಪ್ರಪನ್ನನಾದ ನಂತರ ಅವನನ್ನು ದೇವರಂತೆ ಭಾವಿಸಿ ಗೌರವಿಸಬೇಕೆಂಬುದೇ ಭಗವತ್ ರಾಮಾನುಜರ ಸೂತ್ರ. ಅವರ ಪ್ರಕಾರ ಅವನು ದ್ವಿಜರಿಂದಲೂ ಪೂಜಿಸಲರ್ಹರು.

ದೇವರ ದೃಷ್ಟಿಯಲ್ಲಿ ಶ್ರೀವೈಷ್ಣವರಾದವರು ಪೂರ್ವದಲ್ಲಿ ಯಾವುದೇ ಜಾತಿಯವರಾದರೂ ಸಮಾನರು ಹಾಗೂ ಎಲ್ಲ ಸಾಧನ ಸಿದ್ಧಿಗೆ ಅರ್ಹರಾಗಿರುತ್ತಾರೆ. ಆದುದರಿಂದಲೇ ಅನೇಕ ಆಳ್ವಾರರು ಬ್ರಾಹ್ಮಣರಲ್ಲದಿದ್ದರೂ, ಕೆಳಜಾತಿಯಲ್ಲಿ ಜನ್ಸಿಸಿದ್ದರೂ ಶ್ರೀವೈಷ್ಣವರ ದೃಷ್ಟಿಯಲ್ಲಿ ಶ್ರೇಷ್ಠತೆಯನ್ನು ಹೊಂದಿದವರಾಗಿ ನಿತ್ಯ ಪೂಜಾರ್ಹರಾಗಿದ್ದಾರೆ. ಇವರು ಋಷಿಗಳಿಗಿಂತ ಕರ್ಮ ಜ್ಞಾನದಲ್ಲಿ ಕಮ್ಮಿಯಿದ್ದರೂ ಭಕ್ತಿ -- ಪ್ರಪತ್ತಿಗಳಲ್ಲಿ ಹೆಚ್ಚಿನವರು. ಹಾಗಾಗಿ ಶ್ರೀವೈಷ್ಣವ ಸಂಪ್ರದಾಯದಲ್ಲಿ ಲಿಂಗ, ಜಾತಿ, ಭೇಧಗಳಿಲ್ಲದೆ ಎಲ್ಲರಿಗೂ ಪ್ರಣವದೊಂದಿಗೆ ತಿರುಮಂತ್ರವನ್ನು ಬೋಧಿಸುವ ಕ್ರಮವನ್ನು ರಾಮಾನುಜರು ಅನುಷ್ಠಾನಕ್ಕೆ ತಂದರು.

ಒಂದು ವಿಷಾದದ ಸಂಗತಿಯೆಂದರೆ, ನಂತರದ ದಿನಗಳಲ್ಲಿ ರಾಮಾನುಜರ ಈ ದಿಟ್ಟಮಾರ್ಗವನ್ನು ಮುರಿದರು ಕೆಲವರು. ಇದು ಭಗವದ್ ರಾಮಾನುಜರ ಉದ್ದೇಶವಾಗಿದ್ದಿದ್ದರೆ ಅವರು ನಡೆಸಿದ ಜೀವನದ ಮಾರ್ಗ ಅವರು ಹೇಳಿದ್ದಕ್ಕಿಂತ ವಿಭಿನ್ನ ಎಂದಾಗುವುದು. ಹಾಗಿದ್ದಲ್ಲಿ ಅವರು ಶ್ರೀರಂಗದಿಂದ ಮಧುರೆಗೆ ಬೇಸರವಿಲ್ಲದೆ ಹದಿನೆಂಟುಬಾರಿ ಹೋಗಿ ಗೋಷ್ಠಿಪೂರ್ಣರನ್ನು ಒಲಿಸಿಕೊಂಡು ಅವರಿಂದ ಬಹಳ ಶ್ರಮಪಟ್ಟು ಕಲಿತ ಅತಿಗೋಪ್ಯವಾದ ಮಂತ್ರಗಳ ರಹಸ್ಯಾರ್ಥವನ್ನು ಸಕಲ ಚೇತನರ ಉದ್ಧಾರವಾಗಲೆಂಬ ಉದ್ದೇಶದಿಂದ ಎಲ್ಲರಿಗೂ ಉಪದೇಶಿಸಲು ಗುಡಿಯ ಗೋಪುರದ ಮೇಲೆ ನಿಂತು ಆ ಮಂತ್ರಗಳನ್ನು ಘೋಷಿಸುತ್ತಿದ್ದರೆ? ಕೋಪಗೊಂಡಿದ್ದ ಗುರುಗಳು "ನಿನಗೆ ನರಕ ಪ್ರಾಪ್ತಿಯಾಗುತ್ತದೆ" ಎಂದಾಗ "ಗುರುಗಳೆ ಮಂತ್ರಪ್ರಭಾವದಿಂದ ಕೇಳಿಸಿಕೊಂಡವರಿಗೆಲ್ಲ ಮೋಕ್ಷಪ್ರಾಪ್ತಿಯು ನಿಶ್ಚಯವಾದರೆ ನಾನು ನರಕಕ್ಕೆ ಹೋಗಲು ಸಿದ್ಧ." ಎಂದರು. ಆಗ ಅವರ ಗುರುಗಳಿಗೆ ಬಂದ ಅನುಭವವೇನು? ಭಗವಂತನ ಕಾರುಣ್ಯಕ್ಕಿಂತಲೂ ರಾಮಾನುಜರ ಕಾರುಣ್ಯ ಮಹತ್ತರವಾದುದು ಎಂಬುದು. ರಾಮಾನುಜರಲ್ಲಿರುವಷ್ಟು ವಿಶಾಲ ಭಾವನೆ, ಔದಾರ್ಯ ತನ್ನಲ್ಲಿ ಬರಲಿಲ್ಲವಲ್ಲಾ ಎಂದು ಶೋಕಿಸಿ, ರಾಮಾನುಜರನ್ನು 'ಎಂಬೆರುಮಾನಾರ್' ಎಂದು ಕರೆದರು.

ಭಗವದ್ ರಾಮಾನುಜರು ಪಂಚಮರಿಗೆ ಸಂಸ್ಕಾರವನ್ನು ಮಾಡಿಸಿ 'ತಿರುಕ್ಕುಲತ್ತಾರ್' ಎಂದು ಹೆಸರಿಟ್ಟರು. ಮೇಲುಕೋಟೆ, ಅಂತಹ ಪುಣ್ಯಕ್ಷೇತ್ರದಲ್ಲಿ ಅವರಿಗೆ ದೇವಸ್ಥಾನ ಪ್ರವೇಶದ ಅರ್ಹತೆಯನ್ನು ೯೦೦ ವರ್ಷಗಳ ಹಿಂದೆಯೇ ಕೊಡಮಾಡಿದ್ದರು. ಅವರು ಯಾಮುನರ ಗ್ರಂಥವನ್ನು ಓದಿ ಅವರ ಶಿಷ್ಯರ ಮೂಲಕ ಅವರ ಸಂಪ್ರದಾಯದ ಮೂಲಾರ್ಥಗಳನ್ನೆಲ್ಲ ಅರಿತು, ಗ್ರಂಥರಚನೆ ಮಾಡಿ, ನರಕಮಾರ್ಗವನ್ನು ತಪ್ಪಿಸಲು, ಭಕ್ತಿ ಪ್ರಪತ್ತಿಗಳಿಂದ ಪರಮಪದದ ಮಹಾದ್ವಾರವನ್ನು ತೆರೆದಿಟ್ಟು ಶ್ರೀ ವೈಷ್ಣವ ಪಂಥದ ಸಂಘಟನೆಗಾಗಿ ಶ್ರಮಿಸಿದರು.

ಭಗವದ್ ರಾಮಾನುಜರ ಪದವು ಶ್ರೀ ವೈಷ್ಣವರಿಗೆ ಪರಮ ಶ್ರೇಷ್ಠವು. ನಾರಾಯಣ ಪದವು ಬಂಧ -- ಮೋಕ್ಷಗಳೆರಡಕ್ಕೂ ಕಾರಣವಾದರೆ, 'ರಾಮಾನುಜ' ಎಂಬುದು ತನ್ನ ಕಾರುಣ್ಯದ ಮಹಿಮೆಯಿಂದ ಕೇವಲ ಮೋಕ್ಷವನ್ನೇ ಅನುಗ್ರಹಿಸುತ್ತದೆ.

ಭಗವದ್ರಾಮುನಜರು ಶ್ರೀವೈಷ್ಣವರಿಗೆ ನಾಲ್ಕು ಪ್ರಮುಖ ದಿವ್ಯಕ್ಷೇತ್ರಗಳ ದರ್ಶನವನ್ನು ಅವಶ್ಯವೆಂದು ಹೇಳಿದ್ದಾರೆ. ಅವೇ ಶ್ರೀರಂಗ, ತಿರುಮಲೆ, ಕಾಂಚೀಪುರ, ಮೇಲುಕೋಟೆ. ಈ ದಿವ್ಯದೇಶಗಳನ್ನು ದರ್ಶಿಸಿ, ಮೂರ್ತಿಗಳ ದರ್ಶನಮಾಡಿ, ಅವರ ಕೈಂಕರ್ಯ ಮಾಡುವುದನ್ನು ತಮ್ಮ ಗುರಿ

ಯಾಗಿಟ್ಟುಕೊಂಡಿರಬೇಕಾದುದು. ಪ್ರತಿಯೊಬ್ಬ ಶ್ರೀ ವೈಷ್ಣವನ ಗುರಿಯಾಗಬೇಕೆಂಬುದು ಅವರ ಆಜ್ಞೆ.

ಅವರ ದಿವ್ಯಾಜ್ಞೆಯಂತೆ ಶ್ರೀವೈಷ್ಣವನು ಪ್ರತಿನಿತ್ಯವೂ ಅನುಸಂಧಾನಮಾಡುವ ಶ್ಲೋಕ ಈ ಕೆಳಗಿನದು;

ಶ್ರೀರಂಗ ಮಂಗಳ ಮಣಿಂ ಕರುಣಾನಿವಾಸಂ
ಶ್ರೀ ವೇಂಕಟಾದ್ರಿ ಶಿಖರಾಲಯ ಕಾಳಮೇಘಂ
ಶ್ರೀ ಹಸ್ತಿ ಶೈಲ ಶಿಖರೋಜ್ವಲ ಪಾರಿಜಾತಂ
ಶ್ರೀಶಂ ನಮಾಮಿ ಶಿರಸಾ ಯದುಶೈಲ ದೀಪಂ

ಶ್ರೀಮನ್ನಾರಾಯಣನಿಂದ ವಿಶಿಷ್ಟಾದ್ವೈತ ತತ್ತ್ವವೆಂಬ ಆತ್ಮವಿದ್ಯೆಯ ರಹಸ್ಯವನ್ನು ಪಡೆದ ವಿಷ್ಣು ಪತ್ನಿ ಮಹಾಲಕ್ಷ್ಮಿಯು ಶ್ರೀ ವೈಷ್ಣವ ಆಚಾರ್ಯ ಪರಂಪರೆಯಲ್ಲಿ ಎರಡನೆಯವರು. ಮಹಾಲಕ್ಷ್ಮಿಯಿಂದ ವಿಷ್ವಕ್ಸೇನರಿಗೆ, ವಿಷ್ವಕ್ಸೇನರಿಂದ ನಮ್ಮಾಳ್ವಾರರಿಗೆ, ನಮ್ಮಾಳ್ವಾರರಿಂದ ಯೋಗದೆಶೆಯಲ್ಲಿ ನಾಥಮುನಿಗಳಿಗೆ, ನಾಥಮುನಿಗಳಿಂದ ಉಯ್ಯಕ್ಕೊಂಡಾರ್ ಮತ್ತು ಮಣಕ್ಕಾಲ್ ನಂಬಿಗಳ ಮೂಲಕ ಆಳವಂದಾರರಿಗೆ, ಆಳವಂದಾರರಿಂದ ಪೆರಿಯನಂಬಿಯ ಮೂಲಕ ರಾಮಾನುಜರಿಗೆ ಉಪದೇಶಿಸಲ್ಪಟ್ಟಿತು. ಹಾಗಾಗಿ ಶ್ರೀ ವೈಷ್ಣವರಿಗೆ ಒಂದು ಹಿರಿದಾದ ಗುರು ಪರಂಪರೆ ಇದೆ. ಈ ಆಚಾರ್ಯರುಗಳಲ್ಲಿ ಶ್ರೀ ವೈಷ್ಣವರಿಗೆ ಅತ್ಯಧಿಕವಾದ ಭಕ್ತಿ -- ಗೌರವಗಳು ಇವೆ.

ಆಚಾರ್ಯರುಗಳು ಭಗವಂತನಿಗೆ ಅತಿ ಸನ್ನಿಹಿತ ವ್ಯಕ್ತಿಗಳು ಮತ್ತು ಆತನ ಹೃದಯವನ್ನು ಅರಿತ ದಿವ್ಯಜ್ಞಾನಿಗಳು. ಭಗವಂತನ ದಯೆಯು ಆಚಾರ್ಯರುಗಳ ಮೂಲಕ ಪ್ರವಹಿಸಿ, ಅವರುಗಳ ಅನುಷ್ಠಾನ ಮತ್ತು ಕೃತಿಗಳ ಮೂಲಕ ಚೇತನರಿಗೆ ಭಗವತ್ ತತ್ವಗಳನ್ನು ಬೋಧಿಸಿ ಅವರನ್ನು ಮೇಲಕ್ಕೆ ಎತ್ತುತ್ತದೆ. ಇಂಥಹ ಆಚಾರ್ಯರುಗಳನ್ನು ಆಶ್ರಯಿಸಿ ಸದಾ ಸೇವಾ ತತ್ಪರನಾಗಿ, ನಾರಾಯಣನಿಗೆ ಕೈಂಕರ್ಯ ಮಾಡುತ್ತ, ಮಂತ್ರವನ್ನು ಜಪಿಸುತ್ತ, ಭಗವಂತ ಜ್ಞಾನವನ್ನು ಪಡೆದಿರುವ ಪರಮ ಭಾಗವತರ ಸಂತ್ಸಂಗದಲ್ಲಿದ್ದು, ಸಂತುಷ್ಟಿ -- ವೈರಾಗ್ಯಗಳಿಂದ ಜೀವಿಸುವುದು ಶ್ರೀವೈಷ್ಣವನ ಜೀವನೊದ್ದೇಶ ಹಾಗೂ ಧ್ಯೇಯವಾಗಿರಬೇಕು.

ರಹಸ್ಯಮಂತ್ರಾರ್ಥ, ಶ್ರೀ ಭಾಷ್ಯ, ಭಗವದ್ವಿಷಯ, ಯತಿರಾಜಮಠ, ಪರಕಾಲಮಠ, ಜೀಯರುಗಳ ಮಠ, ಅಹೋಬಿಲಮಠ, ಆಂಡವನ್ ಆಶ್ರಮ, ಮುದಲಿಯಾಂಡಾನ್ ಎಂಬೀ ಆಚಾರ್ಯ ಪರಂಪರೆಗಳಲ್ಲಿನ ಮುಖ್ಯ ಆಚಾರ್ಯರುಗಳ ಜೀವನ ಬೋಧನೆ, ಕೃತಿಗಳ ಪರಿಚಯ ಮಾಡಿಕೊಂಡು ಸಾರವನ್ನು ಆರಿಸಿ ಜಳ್ಳನ್ನು ತೆಗೆದುಹಾಕಿ, ಭೇದವನ್ನು ಸಮನ್ವಯ ಮಾಡಿ ಸರಿಪಡಿಸಿ ಶ್ರೀ ವೈಷ್ಣವ ಮತವು ಒಂದುಗೂಡಿ ಅಭಿವೃದ್ಧಿ ಹೊಂದುವಂತೆ ಎಲ್ಲ ಶ್ರೀವೈಷ್ಣವರೂ ವಿಶಿಷ್ಟಾದ್ವೈತ ಸಾರವನ್ನು ಅರಗಿಸಿಕೊಳ್ಳಬೇಕು. ಭಗವದ್ ರಾಮಾನುಜರಂಥಹ ದಾರ್ಶನಿಕರಿಂದ ಶ್ರೀವೈಷ್ಣವತ್ವವು ಶ್ರೀಮಂತವಾಗಿದೆ. ಅನಾದಿಕಾಲದಿಂದಲೂ ಸಂಸಾರದಲ್ಲಿ ತೊಳಲುತ್ತಿರುವ ಚೇತನನಿಗೆ ಪರಮಾತ್ಮನ ಸ್ವರೂಪವನ್ನು ಸುಲಭವಾಗಿ ಅರಿಯುವ ಮಾರ್ಗವು ಈ ಮಹಾತ್ಮರುಗಳಿಂದ ದೊರೆತಿದೆ. ತನ್ನ ಮತ್ತು ಪರಮಾತ್ಮನ ನಿತ್ಯ ಸಂಬಂಧವನ್ನು ಅರಿತು, ಅವನ ಅನುಗ್ರಹದಿಂದಲೇ ಸಾಧನಾನುಷ್ಠಾನುಗಳನ್ನು ಕೈಗೊಂಡು, ಅವನನ್ನು ಸ್ತುತಿಸಿ, ಭಜಿಸಿ ಅವನಲ್ಲಿಯೇ ಅನನ್ಯ ಭಾವದಿಂದ ತನ್ನನ್ನೂ ತನ್ನದೆಂಬುದೆಲ್ಲವನ್ನೂ ಸಮರ್ಪಣ ಮಾಡಿ, ಅವನ ಪ್ರಸಾದವನ್ನು ಪಡೆದುಕೊಂಡು, ದೇಹವಸಾನ ಕಾಲದಲ್ಲಿ ಅರ್ಚಿರಾದಿ ಮಾರ್ಗದಲ್ಲಿ ಹೋಗಿ, ಸ್ವಸ್ಥರೂಪಾವಿರ್ಭಾವವನ್ನು ಹೊಂದಿ, ಆ ಪರಮಾತ್ಮನ ದಿವ್ಯಾನುಭವದ ಹಾಗೂ ನಿತ್ಯ ಕೈಂಕರ್ಯದ ಮಹದಾನಂದವನ್ನು ಪಡೆದುಕೊಳ್ಳುವುದು ಶ್ರೀವೈಷ್ಣವನ ಮುಖ್ಯ ಗುರಿಯಾಗಿರಬೇಕು.

(ಸಾಧಾರ ಸಂಗ್ರಹ)



# ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಬರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

***ಶ್ರೀ ಗೋವಿಂದರಾಜಸ್ವಾಮಿ ದೇವಾಲಯ***
***ಶ್ರೀ ಕೋದಂಡರಾಮಸ್ವಾಮಿ ದೇವಾಲಯ***
***ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು***
***ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ***
***ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ***

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು. (೨ ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ ೬--೦೦, ಬೆಳಗ್ಗೆ ೧೦--೦೦, ಸಂಜೆ ೩--೦೦

ಬಸ್ ಪ್ರಯಾಣದ ದರ : ಒಂದು ಟಿಕೆಟ್ಟಿಗೆ ೨೦ ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇ.**

# ಪಂಚ ಮಹಾಯಜ್ಞ

---ವಿದ್ವಾನ್ 'ರಘುಸುತ'.

ಮೂರು ರೀತಿಯ ಕರ್ಮಗಳಿರುತ್ತವೆ -- ನಿತ್ಯ ನೈಮಿತ್ತಿಕ ಹಾಗೂ ಕಾಮ್ಯ. ಕೆಲವು ಕರ್ಮಗಳಿಂದ ಯಾವುದೇ ರೀತಿಯ ಫಲ ವಿಶೇಷವು ಪ್ರಾಪ್ತವಾಗುವುದಿಲ್ಲ. ಆದರೆ ಅವುಗಳನ್ನು ಮಾಡದೆ ಇರುವುದರಿಂದ ಪಾಪವು ಉಂಟಾಗುತ್ತದೆ. ಇವನ್ನು 'ನಿತ್ಯ' ಎಂದು ಕರೆಯುತ್ತಾರೆ. ಇವನ್ನು ಪ್ರತಿನಿತ್ಯವೂ ತಪ್ಪದೆ ಮಾಡಬೇಕು. ಉದಾ : ತ್ರಿಕಾಲ ಸಂಧ್ಯಾವಂದನೆ, ಪಂಚ ಮಹಾಯಜ್ಞ ಇತ್ಯಾದಿಗಳು.

ಅವರರವರ ಕರ್ಮಾನುಸಾರ ಮಾನವನು ಬೇರೆ ಬೇರೆ ವರ್ಗಗಳಲ್ಲಿ ಜನ್ಮವೆತ್ತುತ್ತಾನೆ. ಅವನು ಆ ವರ್ಗಕ್ಕೆ (ಶ್ರೇಣಿಗೆ) ಅನುಗುಣವಾಗಿರುವ ಕರ್ಮಗಳನ್ನು ನೆರವೇರಿಸಲೇಬೇಕು. ಆ ಕರ್ಮಗಳನ್ನು ಮಾಡಲಿಲ್ಲವೆಂದರೆ ಅವನ ಅಧಃಪತನವಾದಂತೆಯೇನೇ! ಅವನಿಗೆ ಪಾಪ ಉಂಟಾಗುತ್ತದೆ.

ಪಂಚ ಮಹಾಯಜ್ಞಗಳನ್ನು ಮಾಡುವುದರಿಂದ ಆತ್ಮೋನ್ನತಿ ಇತ್ಯಾದಿ ಫಲಗಳು ಪ್ರಾಪ್ತವಾಗುತ್ತವೆ. ಆದಾಗ್ಯೂ 'ಪಂಚ ಸೂನಾ' ದೋಷದಿಂದ ಮುಕ್ತಿ ಪಡೆಯುವುದಕ್ಕಾಗಿ--

ಸರ್ವೈ ರ್ಗೃಹಸ್ಥೈಃ ಪಂಚ
ಮಹಾಯಜ್ಞಾಃ ಅಹರಹಃ ಕರ್ತವ್ಯಾಃ

ಎನ್ನುವಂತೆ ಗೃಹಸ್ಥರು ಮಾತ್ರ ತಪ್ಪದೆ ಪ್ರತಿದಿನ ಪಂಚ ಮಹಾಯಜ್ಞಗಳನ್ನು ಮಾಡಲೇಬೇಕು.

ಈ ಜೀವನವೆನ್ನುವ ಯಾತ್ರೆಯಲ್ಲಿ ಪ್ರತಿದಿನ ಸಾವಿರಾರು ಜೀವಜಂತುಗಳ ಸಂಹಾರವಾಗುತ್ತವೆ. ನಡೆದಾಡುವಾಗ, ಊಟ ಮಾಡುವ ಪ್ರತಿಯೊಂದು ತುತ್ತಿನಲ್ಲಿ ಹಾಗೂ ಉಚ್ವಾಸ -- ನಿಶ್ವಾಸ ಮಾಡುವಾಗ ಜೀವಿಗಳ ಹಿಂಸೆ ಆಗಿಯೇ ಆಗುತ್ತದೆ. ಪ್ರಾಣಗಳನ್ನು ಹೊಂದಿರುವ ಮಾನವನಿಗೆ ಈ ಪಾಪಗಳಿಂದ ಬದುಕಿ -- ಉಳಿಯುವುದು ಸಾಧ್ಯವೇ ಇಲ್ಲ. ಆದುದರಿಂದ ಈ ಪಾಪಗಳೆಲ್ಲವುಗಳಿಂದ ಮುಕ್ತವಾಗಲು, ಮಹಾಮಹಿಮರಾದ ಮಹರ್ಷಿಗಳು ಪಂಚಮಹಾಯಜ್ಞದ ವಿಧಾನವನ್ನು ತಿಳಿಸಿರುವರು.

ಮನು ಹೇಳುವುದೇನೆಂದರೆ--
ಪಂಚ ಸೂನಾ ಗೃಹಸ್ಥಸ್ಯ
ಚುಲ್ಲೀ ಪೇಷಣ್ಯುಪಸ್ಕರಃ
ಕಂಡನೀ ಛೇದ ಕುಂಭಶ್ಚ
ಬಧ್ಯತೇ ಯಾಸ್ತು ವಾಹಯನ್
ತಾಸಾಂ ಕ್ರಮೇಣ ಸರ್ವಾಸಾಂ
ನಿಷ್ಕೃತ್ಯರ್ಥಂ ಮಹರ್ಷಿಭಿಃ
ಪಂಚ ಕ್ಲುಪ್ತಾ ಮಹಾಯಜ್ಞಾಃ
ಪ್ರತ್ಯಹಂ ಗೃಹಮೇಧಿನಾಮ್
(3/ 68-69)

'ಪ್ರತಿಯೊಬ್ಬ ಗೃಹಸ್ಥನ ಮನೆಯಲ್ಲೂ ಒಲೆ, ಬೀಸುವ ಕಲ್ಲು, ಪೊರಕೆ, ಒರಳು ಹಾಗೂ ನೀರಿನ ಪಾತ್ರೆ -- ಈ ಐದೂ ಹಿಂಸೆ ನಡೆಯುವ ಸ್ಥಳಗಳು. ಈ ಸಾಧನಗಳಿಂದ ಆಗುವ ಹಿಂಸೆಯ ನಿಷ್ಕೃತಿಗಾಗಿ ಪ್ರತಿದಿನ ಗೃಹಸ್ಥನು ಪಂಚಮಹಾಯಜ್ಞಗಳನ್ನು ನಡೆಸಬೇಕೆಂದು ಮಹರ್ಷಿಗಳು ವಿಧಿಸಿದ್ದಾರೆ.'

ಎರಡು ರೀತಿಯ ಯಜ್ಞಗಳಿವೆ. ಒಂದು ಸಾಮಾನ್ಯ ರೀತಿಯ ಯಜ್ಞ; ಮತ್ತೊಂದು ಮಹಾಯಜ್ಞ. ಯಜ್ಞ ಹಾಗೂ ಮಹಾಯಜ್ಞಗಳ ಸ್ವರೂಪ ಹಾಗೂ ಅವುಗಳ ವರ್ಣನೆಯನ್ನು ಮಹರ್ಷಿ ಭಾರದ್ವಾಜರು ಈ ರೀತಿಯಲ್ಲಿ ತಿಳಿಸಿದ್ದಾರೆ--

'ಯಜ್ಞಃ ಕರ್ಮಸು ಕೌಶಲಮ್'

ಕುಶಲತೆಯಿಂದ ಅನುಷ್ಠಾನ ಮಾಡುವ ವಿಧಿಯನ್ನು 'ಯಜ್ಞ' ಎಂದು ಕರೆಯಲಾಗುತ್ತದೆ.

'ಸಮಷ್ಟಿ ಸಂಬಂಧಾನ್ ಮಹಾಯಜ್ಞಃ'

ನಂತರದಲ್ಲಿ ಸಮಷ್ಟಿಸಂಬಂಧದಲ್ಲಿ ಉಂಟಾಗುವುದನ್ನೆಲ್ಲ 'ಮಹಾಯಜ್ಞ' ಎಂದು ಕರೆಯುವರು.

ಇದೇ ಮಾತನ್ನು ಮಹರ್ಷಿ ಆಂಗೀರಸರು ತಿಳಿಸುತ್ತಾರೆ--

'ಯಜ್ಞ ಮಹಾಯಜ್ಞೇ ವ್ಯಷ್ಟಿ
ಸಮಷ್ಟಿ ಸಂಬಂಧಾತ್'

ವ್ಯಷ್ಟಿ -- ಸಮಷ್ಟಿ ಸಂಬಂಧಗಳಿಂದ ಯಜ್ಞ -- ಮಹಾಯಜ್ಞಗಳೆಂದು ಕರೆಯುತ್ತೇವೆ.

ಯಜ್ಞವು ಆತ್ಮೋನ್ನತಿ ಹಾಗೂ ಆತ್ಮಕಲ್ಯಾಣದ ಫಲವನ್ನು ನೀಡುತ್ತದೆ. ಅದರ ವ್ಯಷ್ಟಿಯೊಂದಿಗಿನ ಸಂಬಂಧದಿಂದ, ಅದರಲ್ಲಿ ಸ್ವಾರ್ಥದ ಪ್ರಾಧಾನ್ಯತೆ ಬಂದು ಬಿಡುತ್ತದೆ. ಇದೇ ಇದರಲ್ಲಿ ನ್ಯೂನತೆಯಾಗಿದೆ.

ಮಹಾಯಜ್ಞದ ಫಲವು ಜಗತ್ ಕಲ್ಯಾಣವಾಗಿದೆ. ಅದರ ಸಮಷ್ಟಿಯೊಂದಿಗಿನ ಸಂಬಂಧವಾಗುವುದರಿಂದ ಅದರಲ್ಲಿ ಪ್ರಧಾನವಾಗಿ ನಿಸ್ವಾರ್ಥತೆಯು ಇರುತ್ತದೆ. ಇದೇ ಇದರ ವಿಶೇಷತೆಯಾಗಿದೆ.

ಯಜ್ಞಾನುಷ್ಠಾನದ ಪ್ರಭಾವದಿಂದ ಜೀವಿಯ ಕ್ಷುದ್ರತೆ, ಅಲ್ಪಜ್ಞತೆಗಳ ವಿನಾಶವಾಗುತ್ತದೆ. ಅಂತ ಹವನಿಗೆ ಪರಮಾತ್ಮನೊಂದಿಗಿನ ಏಕತೆಯು ಪ್ರಾಪ್ತವಾಗುತ್ತದೆ. ಅದರ ಅನುಷ್ಠಾನದ ಮಹತ್ವವು ಸರ್ವಮಾನ್ಯವಾದುದು -- ಎಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ.

## ಪಂಚ ಮಹಾಯಜ್ಞ

ಪಂಚಮಹಾಯಜ್ಞದ ವರ್ಣನೆಯನ್ನು ಸಾಮಾನ್ಯವಾಗಿ ಎಲ್ಲ ಋಷಿ -- ಮುನಿಗಳೂ ತಮ್ಮ ತಮ್ಮ ಧರ್ಮ ಗ್ರಂಥಗಳಲ್ಲಿ ಮಾಡಿದ್ದಾರೆ. ಅವುಗಳಲ್ಲಿನ ಕೆಲವನ್ನು ಇಲ್ಲಿ ಉದಾಹರಿಸಲಾಗಿದೆ--

ತೈತ್ತಿರೀಯಾರಣ್ಯಕದಲ್ಲಿ--

'ಪಂಚ ವಾ ಏತೇ ಮಹಾಯಜ್ಞಾಃ
ಸತತಂ ಪ್ರತಾಯಂತೆ........
ದೇವಯಜ್ಞಃ ಪಿತೃಯಜ್ಞೋ
ಮನುಷ್ಯಯಜ್ಞೋ ಬ್ರಹ್ಮಯಜ್ಞ ಇತಿ'

ಆಶ್ವಲಾಯನ ಸೂತ್ರದಲ್ಲಿ--

'ಅಥಾತಃ ಪಂಚ ಮಹಾಯಜ್ಞಾ ದೇವಯಜ್ಞೋ
ಭೂತಯಜ್ಞಃ ಪಿತೃಯಜ್ಞೋ
ಬ್ರಹ್ಮಯಜ್ಞೋ ಮನುಷ್ಯಯಜ್ಞಾಇತಿ'

ಛಂದೋಗ ಪರಿಶಿಷ್ಟದಲ್ಲಿ--

'ದೇವಭೂತ ಪಿತೃ ಬ್ರಹ್ಮ
ಮನುಷ್ಯಾಣಾಮನುಕ್ರಮಾತ್
ಮಹಾಸತ್ರಾಣಿ ಜಾನೀಯಾತ್
ತ ಏವ ಹಿ ಮಹಾಮಖಾಃ'

ಯಾಜ್ಞವಲ್ಕ್ಯ ಸ್ಮೃತಿಯಲ್ಲಿ--

'ಬಲಿ ಕರ್ಮ ಸ್ವಧಾಹೋಮ
ಸ್ವಾಧ್ಯಾಯಾ ತಿಥಿ ಸತ್ಕ್ರಿಯಾಃ
ಭೂತ ಪಿತ್ರಮರಬ್ರಹ್ಮ

## ದಾಸಸಾಹಿತ್ಯ ಪ್ರಾಜೆಕ್ಟ್, ತಿ. ತಿ. ದೇ.

# ಅತಿ ಸುಲಭದರದಲ್ಲಿ ಅತ್ಯುತ್ತಮ ಧ್ವನಿಸುರುಳಿಗಳು

ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಕುರಿತು ಕನ್ನಡದ ಹರಿದಾಸರು ಪರಂಪರೆಯಿಂದ ಹಾಡುತ್ತಿದ್ದು, ಭಕ್ತಿ ಸಾಹಿತ್ಯದ ಭಂಡಾರವೇ ಇಂದು ನಮಗೆ ತವನಿಧಿಯಾಗಿ ದೊರೆತಿದೆ. ಶ್ರೀ ಪಾದರಾಜ ವ್ಯಾಸರಾಜ, ಪುರಂದರ, ಕನಕ, ಪ್ರಸನ್ನವೆಂಕಟ, ವಿಜಯದಾಸ ಜಗನ್ನಾಥದಾಸ ಗೋಪಾಲದಾಸರೇ ಮೊದಲಾಗಿ ನೂರಾರು ಮಂದಿ ಸಾವಿರಾರು ಕೀರ್ತನೆಗಳನ್ನು ಮುಂದಿನವರಿಗೆ ಬಳುವಳಿಯಾಗಿ ಕೊಟ್ಟು ಹೋಗಿದ್ದಾರೆ. ಅಂತಹ ಹಿರಿಯರ ಕೀರ್ತನೆಗಳನ್ನು ಕೇಳುವ ಮನನಮಾಡುವ ಅವಕಾಶವನ್ನು ಕಲ್ಪಿಸಲು ತಿ.ತಿ.ದೇ. ಧ್ವನಿಸುರುಳಿಗಳನ್ನು ತಯಾರಿಸಿದೆ. ನಾಡಿನ ಖ್ಯಾತ ಗಾಯಕ ವಿದ್ವನ್ಮಣಿಗಳು ಹಾಡಿರುವ ಈ ಗೀತೆ ಮಾಲೆಗಳು ಸುಲಭದರದಲ್ಲಿ ದೊರೆಯುವಂತೆ ಏರ್ಪಾಡು ಮಾಡಲಾಗಿದೆ.

| ನಂ | ಧ್ವನಿಸುರುಳಿಯ ಹೆಸರು | ಗಾಯಕರು | ಗೀತಕಾರರು |
|---|---|---|---|
| 3001 | ಪುರಂದರದಾಸರು -- ಶ್ರೀನಿವಾಸಸಂಸ್ತುತಿ | ಸರೋಜ, ಲಲಿತ. | ಪುರಂದರದಾಸರು. |
| 3002 | ಪುರಂದರದಾಸರು -- ಶ್ರೀನಿವಾಸವೈಭವ | ಎಂ.ಎಲ್. ವಸಂತಕುಮಾರಿ | ಪುರಂದರದಾಸರು. |
| 3003 | ಹರಿದಾಸರು ಕಂಡ ಶ್ರೀನಿವಾಸ | ಶ್ರೀ ಶ್ರೀ ವಿದ್ಯಾಭೂಷಣ ತೀರ್ಥರು | ವಿವಿಧ ಹರಿದಾಸರು. |
| 3004 | ತಿರುಮಲೆಯ ಚೆಲುವ | ವಾಣಿ ಜಯರಾಂ | ಪ್ರಸನ್ನ ವೆಂಕಟದಾಸರು. |
| 3005 | ಮೂರುನಾಮಗಳ ಮೂರುತಿ | ಸರೋಜ, ಲಲಿತ. | ಜಗನ್ನಾಥದಾಸರು, ಗೋಪಾಲದಾಸರು. |
| 3006 | ಶ್ರೀನಿವಾಸ ತತ್ವ | ಬೇಲೂರುಸೋದರಿಯರು | ಪುರಂದರದಾಸರು. |
| 3007 | ಭಳಿರೆ ತಿರುಮಲರಾಯ | ಆರ್. ಕೆ. ಶ್ರೀಕಂಠನ್ | ನಿಜದಾಸರು. |
| 3008 | ಗೋವಿಂದ ಮಿಠಾಯಿ | ರತ್ನಮಾಲಾ ಪ್ರಕಾಶ್ | ಪುರಂದರದಾಸರು. |
| 3009 | ಗೋವಿಂದ ಗಾನಾಮೃತ | ಸಂತಭದ್ರಗಿರಿ ಅಚ್ಯುತದಾಸರು | ಪುರಂದರದಾಸರು. |

ಪ್ರತಿಯೊಂದು ಕ್ಯಾಸೆಟ್‌ನ **ಬೆಲೆ ರೂ. 25/-** ಮಾತ್ರ. ಅಂಚೆವೆಚ್ಚ ಪ್ರತ್ಯೇಕ.

**ಬರೆಯಿರಿ :** --- ಸಂಪಾದಕರು -- ಪುಸ್ತಕ ಮಾರಾಟ ವಿಭಾಗ, ತಿ.ತಿ.ದೇ. ತಿರುಪತಿ.

ಮನುಷ್ಯಾಣಾಂ ಮಹಾಮಖಾಃ'

ಮನುಸ್ಮೃತಿಯಲ್ಲಿ--

'ಅಧ್ಯಾಪನಂ ಬ್ರಹ್ಮಯಜ್ಞಃ
ಪಿತೃಯಜ್ಞಸ್ತು ತರ್ಪಣಮ್
ಹೋಮೋ ದೈವೋ ಬಲಿರ್ಭೌತೋ ನೃ
ನೃಯಜ್ಞೋಽ ತಿಥಿಪೂಜನಮ್

ಮೇಲೆ ತಿಳಿಸಿದ ಪಂಚಯಜ್ಞಗಳ ಮುಖಾಂತರ ದೇವತೆ, ಅತಿಥಿ, ಪೋಷ್ಯವರ್ಗ, ಪಿತೃಲೋಕ ಹಾಗೂ ಆತ್ಮ-- ಇತ್ಯಾದಿ ಐವರಿಗೂ ಮಾನವನು ಅನ್ನ ಇತ್ಯಾದಿಗಳನ್ನು ಕೊಡದಿದ್ದಲ್ಲಿ, ಅಂತಹವರು ಬದುಕಿದ್ದೂ ಸತ್ತವರಂತೆಯೇ ಸರಿ. ಅಂತಹವರ ಜೀವನವು ನಿಷ್ಫಲವಾದುದು. ಭಗವಾನ್ ಮನುವಿನ ಆಜ್ಞೆ ಏನೆಂದರೆ--

'ಪಂಚೈತಾನ್ ಯೋ ಮಹಾಯಜ್ಞಾನ್
ನ ಹಾಪಯತಿ ಶಕ್ತಿತಃ
ಸ ಗೃಹೇಽಪಿ ವಸನ್ ನಿತ್ಯಂ
ಸೂನಾದೋಷೈರ್ನ ಲಿಪ್ಯತೆ'

ಯಾವ ಗೃಹಸ್ಥನು ತನ್ನ ಶಕ್ತಿಗೆ ಅನುಸಾರ ಈ ಪಂಚ ಮಹಾಯಜ್ಞಗಳನ್ನು ಒಂದು ದಾನವಾದರೂ ಬಿಡದಿದ್ದಲ್ಲಿ, ಅಂತಹವನು, ಗೃಹಸ್ಥಾಶ್ರಮದಲ್ಲಿ ಪಂಚ ಸೂನಗಳಿಂದ ಹುಟ್ಟಿದ ಪಾಪಕ್ಕೆ ಭಾಗಸ್ಥನಾಗುವುದಿಲ್ಲ.

ಪಂಚಮಹಾಯಜ್ಞವನ್ನು ಅನುಷ್ಠಾನ ಮಾಡುವುದರಿಂದ ಸಮಸ್ತ ಪ್ರಾಣಿ ವರ್ಗಕ್ಕೂ ತೃಪ್ತಿಯಾಗುತ್ತದೆ. ಭಗವಾನ್ ಮನುವು ತನ್ನ ಮನುಸ್ಮೃತಿಯ ತೃತೀಯ ಅಧ್ಯಾಯದ ೮೦, ೮೧ ಹಾಗೂ ೭೫ ಶ್ಲೋಕಗಳಲ್ಲಿ ಈ ವಿವರವನ್ನು ನೀಡಿದ್ದಾರೆ.

ಪಂಚಮಹಾಯಜ್ಞವನ್ನು ಮಾಡುವುದರಿಂದ ಅನ್ನ ಇತ್ಯಾದಿಗಳ ಶುದ್ಧಿಯಾಗುವುದಲ್ಲದೆ, ಮಾಡಿರುವ ಪಾಪಗಳು ಕ್ಷಯಗೊಳ್ಳುತ್ತವೆ. ಪಂಚಮಹಾಯಜ್ಞವನ್ನು ಮಾಡದೆ ಊಟ ಮಾಡುವುದರಿಂದ ಪಾಪ ಉಂಟಾಗುತ್ತದೆ. ಇವರ ಬಗ್ಗೆ ಭಗವಾನ್ ಶ್ರೀಕೃಷ್ಣನು ಹೀಗೆಂದು ಹೇಳುತ್ತಾನೆ--

'ಯಜ್ಞ ಶಿಷ್ಟಾಶಿನಃ ಸಂತೋ
ಮುಚ್ಯಂತೇ ಸರ್ವ ಕಿಲ್ಬಿಷೈಃ
ಭುಂಜತೆ ತೇ ತ್ವಘಂ ಪಾಪಾ
ಯೇ ಪಚಂತ್ಯಾತ್ಮಕಾರಣಾತ್

ಯಜ್ಞದಲ್ಲಿ ಉಳಿದ ಶೇಷಾನ್ನವನ್ನು ಸೇವಿಸುವವನು ಶ್ರೇಷ್ಠಪುರುಷನಾಗುತ್ತಾನೆ. ಅವನು ಪಂಚ

ಹತ್ಯಾಜನಿತ ಎಲ್ಲ ಪಾಪಗಳಿಂದಲೂ ಮುಕ್ತನಾಗುತ್ತಾನೆ. ಆದರೆ ಯಾವ ಪಾಪಿಯು ತನಗಾಗಿ ಮಾತ್ರ ಅಡಿಗೆ ಮಾಡಿಕೊಳ್ಳುವನೊ, ಅಂತಹವನು ತಾನು ಮಾಡಿದ, ಅಂತಹ ಪಾಪವನ್ನೇ ಭಕ್ಷಿಸದೇಕಾಗುತ್ತದೆ.

ಆದುದರಿಂದ ಪಂಚಮಹಾಯಜ್ಞ ಮಾಡಿದ ನಂತರವೇ ಗೃಹಸ್ಥರು ಊಟವನ್ನು ಮಾಡಬೇಕಾಗಿದೆ. ಹೀಗೆ ಮಾಡುವುದರಿಂದ ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷಗಳು ಪ್ರಾಪ್ತವಾಗುತ್ತವೆ.

## ೧. ಬ್ರಹ್ಮಯಜ್ಞ

ವೇದಗಳ ಪಠಣ ಹಾಗೂ ಪಾಠಣವನ್ನು 'ಬ್ರಹ್ಮಯಜ್ಞ'ವೆಂದು ಕರೆಯಲಾಗುತ್ತದೆ. ಮನುವು 'ಅಧ್ಯಯನಂ ಬ್ರಹ್ಮಯಜ್ಞಃ' ಎಂದು ಬರೆದಿದ್ದಾನೆ.

ಗುರಾವಧ್ಯಯನಂ ಕುರ್ವನ್
ಶುಶ್ರೂಷಾದಿ ಸಮಾಚರೇತ್
ಸ ಸರ್ವೋ ಬ್ರಹ್ಮಯಜ್ಞಃ
ಸ್ಯಾತ್ ತತ್ ತಪಃ ಪರಮುಚ್ಯತೇ

'ಕುಲ್ಲೂಕ ಭಟ್ಟ' ಎನ್ನುವವನು ರಚಿಸಿರುವ ಭಾಷ್ಯದ ಅನುಸಾರ ವೇದಾಧ್ಯಯನವನ್ನು ಕೂಡ 'ಬ್ರಹ್ಮಯಜ್ಞ'ವೆಂದು ಕರೆಯಲಾಗುತ್ತದೆ.

ವೇದಗಳಲ್ಲಿ ಕರ್ಮಕಾಂಡ, ಉಪಾಸನಾಕಾಂಡ ಮತ್ತು ಜ್ಞಾನಕಾಂಡದಲ್ಲಿ ಜ್ಞಾನವನ್ನೇ ನೈಮಿತ್ತಿಕ ಪ್ರಾಧಾನ್ಯತೆ ಹಾಗೂ ಪರಮಾಶ್ಯಕತೆ ಎಂದು ತಿಳಿಸಲಾಗಿದೆ. ಜ್ಞಾನದ ಕಾರಣದಿಂದಲೇ ಜೀವಾಂತರದಕ್ಕಿಂತ ಹೆಚ್ಚಾಗಿ ಮನುಷ್ಯ ದೇಹವನ್ನು ಉತ್ತಮವೆಂದು ನಂಬಲಾಗಿದೆ. ಶಾಸ್ತ್ರೋಕ್ತ ಸದಾಚಾರ ಹಾಗೂ ಧರ್ಮಾನುಷ್ಠಾನದಲ್ಲಿ ತತ್ಪರನಾಗಿರುವುದರಲ್ಲಿಯೇ ಮಾನವನಲ್ಲಿಯ ಮನುಷ್ಯತ್ವವಿದೆ. ಅಂತಹ ಮಾನವನೇ ವಾಸ್ತವಿಕವಾಗಿ ಮನುಷ್ಯತ್ವದ ಅಧಿಕಾರಿ ಎಂದು ನಂಬಲಾಗಿದೆ. ಇದರ ನಂತರ ಕರ್ಮಕಾಂಡದ ಮುಖಾಂತರ ಅಂತಃಕರಣದ ಶುದ್ಧಿಯನ್ನು ಮಾಡಿಕೊಳ್ಳುವನು. ಆ ನಂತರ ಮಾನವನು ಉಪಾಸನಾ ಕಾಂಡದ ಅಧಿಕಾರಿಯಾಗುವನು. ತದನಂತರದಲ್ಲಿ ಭಗವತ್ ಕೃಪಾಕಟಾಕ್ಷದ ಸಂಬಂಧದ ಜ್ಞಾನ ಪ್ರಾಪ್ತಿ ಮಾಡಿಕೊಂಡು ಮುಕ್ತನಾಗುವನು. ಇದು ಮಾನವನ ಸಾಮಾನ್ಯ ಉನ್ನತಿಕ್ರಮವಾಗಿದೆ. ಕ್ರಮಬದ್ಧವಾಗಿ ಉನ್ನತಿಗೇರುವುದರಲ್ಲಿ ಜ್ಞಾನವು ಪ್ರಧಾನವಾದುದಾಗಿರುತ್ತದೆ. ಆದುದರಿಂದ ಎಲ್ಲ ಅವಸ್ಥೆಗಳಲ್ಲಿಯೂ ಜ್ಞಾನವೊಂದೇ ಆವಶ್ಯಕವಾಗಿರುತ್ತದೆ. ಆದುದರಿಂದ ಪ್ರಥಮಾವಸ್ಥೆಯಲ್ಲಿಯೇ, ಜ್ಞಾನ ವಿಲ್ಲದೆಯೇ ಸದಾಚಾರವಲ್ಲದ್ದನ್ನು ತ್ಯಾಗ ಮಾಡುವುದು ಹಾಗೂ ಧರ್ಮಾನುಷ್ಠಾನದಲ್ಲಿ ಪ್ರವೃತ್ತಿ ಎಂದಿಗೂ ಸಾಧ್ಯವಾಗಲಾರದು.

'ಬಲವಾನ್ ಇಂದ್ರಿಯಗ್ರಾಮೋ
ವಿದ್ವಾಂಸಮಪಿ ಕರ್ಷತಿ'

ಈ ಉಪದೇಶ ಅನುಸಾರ ಬಲಯುತ ಇಂದ್ರಿಯ ಸಮೂಹದಲ್ಲಿ ಪ್ರತಿ ಬಂಧಕವು ಅವಶ್ಯಕವಾಗಿರುತ್ತದೆ. ಅದರಲ್ಲೂ ಇಂದ್ರಿಯಗಳು ಪ್ರಥಮಾವಸ್ಥೆಯಲ್ಲಿ ಮನುಷ್ಯನನ್ನು ತಮ್ಮ ಕಡೆ ಎಳೆಯಲು ಪ್ರಯತ್ನಿಸುತ್ತವೆಯೇ ಹೊರತು ಧರ್ಮಾನುಷ್ಠಾನಾದಿಗಳಲ್ಲ. ಇದೇ ರೀತಿಯಲ್ಲಿ ತಂದೆ – ತಾಯಿ ಹಾಗೂ ಗುರುಜನಗಳೂ ಕೂಡ ಧರ್ಮಾನುಷ್ಠಾನದಲ್ಲಿ ಪ್ರವೃತ್ತರಾಗುವಂತೆ ಮಾಡಿ, ಅಧರ್ಮದ ಅನುಷ್ಠಾನದಿಂದ ನಿವೃತ್ತಗೊಳಿಸುವಂತೆ ಮಾಡುತ್ತಾರೆ. ಈ ರೀತಿಯಲ್ಲಿ ಎಲ್ಲ ಅವಸ್ಥೆಗಳಲ್ಲಿಯೂ ಜ್ಞಾನದ ಪ್ರಧಾನತೆ ಸಾಧ್ಯವಾಗುತ್ತದೆ. ಆದುದರಿಂದ ಜ್ಞಾನಯಜ್ಞ ಸ್ವರೂಪ ಸ್ವ – ಅಧ್ಯಾಯ (ವೇದಶಾಸ್ತ್ರಗಳ ಪಠಣ – ಪಾಠಣ) ಮಾಡಬೇಕಾದುದು ಅತ್ಯಂತ ಅಗತ್ಯ.

ಬ್ರಹ್ಮಯಜ್ಞ ಮಾಡುವುದರಿಂದ ಜ್ಞಾನ ವೃದ್ಧಿಯಾಗುತ್ತದೆ. ಬ್ರಹ್ಮ ಯಜ್ಞವನ್ನು ಮಾಡುವ ವ್ಯಕ್ತಿಯು ಜ್ಞಾನಪ್ರದ ಮಹರ್ಷಿ ಗಣಕ್ಕೆ ಅನೃಣಿಯಾಗಿ, ಕೃತಜ್ಞನಾಗುತ್ತಾನೆ.

## ೨. ದೇವಯಜ್ಞ

ತನ್ನ ಇಷ್ಟದೇವತೆಯ ಉಪಾಸನೆಗಾಗಿ ಪರಬ್ರಹ್ಮ ಪರಮಾತ್ಮನ ನಿಮಿತ್ತ ಅಗ್ನಿಯಲ್ಲಿ ಮಾಡುವ ಹವನವನ್ನೂ 'ದೇವಯಜ್ಞ'ವೆಂದು ಕರೆಯುತ್ತೇವೆ.

ಯತ್‌ಕರೋಷಿ ಯದಶ್ನಾಸಿ
ಯಜ್ಜು ಹೋಷಿ ದದಾಸಿ ಯತ್
ಯತ್ತಪಸ್ಯಸಿ ಕೌಂತೇಯ
ತತ್ ಕುರುಷ್ವ ಮದರ್ಪಣಮ್

ಪರಬ್ರಹ್ಮ ಪರಮಾತ್ಮನೇ ಎಲ್ಲ ಯಜ್ಞಗಳ ಆಶ್ರಯ ಭೂತನಾಗಿರುವನು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಆದುದರಿಂದ ಬ್ರಹ್ಮಯಜ್ಞದಲ್ಲಿ ಪಿತೃಗಣ, ಪಿತೃಯಜ್ಞದಲ್ಲಿ ಅರ್ಯಮ ಇತ್ಯಾದಿ ನಿತ್ಯಪಿತೃಗಣ ಹಾಗೂ ಪರಲೋಕದ ಕಡೆ ಹೊರಟಿರುವ ನೈಮಿತ್ತಿಕ ಪಿತೃಗಣ, ಭೂತಯಜ್ಞದಲ್ಲಿ ದೇವರೂಪದ ಅನೇಕ ಜೀವಿಗಳನ್ನು ತಿಳಿದು, 'ಯದ್ವದ್ವಿಭೂತಿಮತ್ಸತ್ವಮ್' ಎನ್ನುವ ಗೀತೋಕ್ತಿಯ ಅನುಸಾರ ಈಶ್ವರ ವಿಭೂತಿಧಾರೀ ದೇವತೆಗಳಿಗೆ ಯಾವ ಯಾವ ಪೂಜೆಗಳನ್ನು ಮಾಡುತ್ತೇವೆಯೊ, ಅವೆಲ್ಲವೂ ಪರಮಾತ್ಮನ ಪೂಜೆಗಾಗಿ ಮಾಡುವಂತಹವುಗಳಾಗಿಯೇ ಇವೆ.

ನಿತ್ಯ ಹಾಗೂ ನೈಮಿತ್ತಿಕ ಭೇದದಿಂದ ದೇವತೆಗಳನ್ನು ಎರಡು ಭಾಗಗಳಾಗಿ ವಿಭಾಗಿಸಬಹುದು. ಅವರಲ್ಲಿ ರುದ್ರಗಣ, ವಸುಗಣ ಹಾಗೂ ಇಂದ್ರ ಇತ್ಯಾದಿಯವರನ್ನು ನಿತ್ಯದೇವತೆಗಳೆಂದು ಕರೆಯಲಾಗುತ್ತದೆ. ಗ್ರಾಮದೇವತೆ, ವನದೇವತೆ ಹಾಗೂ ಗೃಹದೇವತೆ ಇತ್ಯಾದಿಯವರನ್ನು ನೈಮಿತ್ತಿಕದೇವತೆಗಳೆಂದು ಕರೆಯಲಾಗುತ್ತದೆ.

ಎರಡೂ ರೀತಿಯ ದೇವತೆಗಳು ಈ ಯಜ್ಞದಿಂದ ತೃಪ್ತರಾಗುವರು. ಯಾವ ದೇವತೆಗಳ ಕೃಪೆಯಿಂದ ಜಡಭಾವವನ್ನು ಹೊಂದಿದ್ದಾಗ್ಯೂ ಕೂಡ ವಿನಶ್ವರ ಕರ್ಮದಿಂದ ಫಲ ಉತ್ಪನ್ನವಾಗುವುದೊ, ಯಾರ ಕೃಪೆಯಿಂದ ಪ್ರಪಂಚದ ಸಮಸ್ತ ಕ್ರಿಯಾಕಲಾಪಗಳ ಬಹಳ ಚೆನ್ನಾದ ಸೃಷ್ಟಿ ಹಾಗೂ ರಕ್ಷೆಯಾಗುತ್ತದೆಯೊ, ಅಂತಹ ದೇವತೆಗಳಿಂದ ಋಣ ಮುಕ್ತನಾಗುವುದಕ್ಕಾಗಿ 'ದೇವಯಜ್ಞ' ಮಾಡುವುದು ಪರಮ ಅವಶ್ಯಕವಾಗಿದೆ.

## ೩. ಭೂತಯಜ್ಞ

ಕ್ರಿಮಿ, ಕೀಟ, ಪತಂಗ, ಪಶು, ಪಕ್ಷಿ-- ಇತ್ಯಾದಿಗಳ ಸೇವೆಯನ್ನು ಭೂತಯಜ್ಞ ಎಂದು ಕರೆಯುತ್ತಾರೆ.

ಪರಮೇಶ್ವರನ ಸೃಷ್ಟಿಯ ಯಾವುದೇ ಅಂಶವನ್ನು ಎಂದಿಗೂ ಉಪೇಕ್ಷೆ ಮಾಡಬಾರದು. ಏಕೆಂದರೆ ಸೃಷ್ಟಿಯ ಒಂದೇ ಅಂಶಕ್ಕೆ ಸಹಾಯ ಮಾಡಿದರೂ ಕೂಡ ಸಮಸ್ತ ಅಂಶಗಳಿಗೂ ಸಹಾಯ ಮಾಡಿದಂತಾಗುತ್ತದೆ ಎಂದು ತಿಳಿಯಬೇಕು. ಆದುದರಿಂದ 'ಭೂತಯಜ್ಞ'ವನ್ನು ಪರಮಧರ್ಮ ಎಂದು ಕರೆಯುತ್ತಾರೆ.

ಪ್ರತಿಯೊಂದು ಪ್ರಾಣಿಯೂ ತನ್ನ ಸುಖಕ್ಕಾಗಿ ಅನೇಕ ಜೀವಿಗಳಿಗೆ ಪ್ರತಿದಿನ ಕ್ಲೇಶ ನೀಡುತ್ತದೆ. ಏಕೆಂದರೆ ಹೀಗಾಗದೆ ಕ್ಷಣಮಾತ್ರವೂ ಶರೀರದ ಯಾತ್ರೆಯು ಮುಂದುವರೆಯುವುದಿಲ್ಲ.

ಮನುಷ್ಯನು ಮಾಡುವ ಉಚ್ವಾಸ -- ನಿಶ್ವಾಸ, ಊಟ ತಿಂಡಿಗಳು, ಸಂಚಾರ -- ವಿಚಾರಗಳ ಸಮಯದಲ್ಲಿ ಅಗಣಿತ ಜೀವಿಗಳ ನಾಶ ಉಂಟಾಗುತ್ತದೆ. ನಿರಿಮಿಷ ಊಟ ಮಾಡುವ ಸಮಯದಲ್ಲಿಯೂ ಕೂಡ, ಅಗಣಿತ ಜೀವಿಗಳ ಪ್ರಾಣವಿಯೋಗವಾಗುತ್ತದೆ. ಇದೇ ಹೀಗಿರುವಾಗ ಇನ್ನು ಆಮಿಷ ಭೋಜನಗಳ ಮಾತನ್ನಂತೂ ಹೇಳುವಂತೆಯೇ

ಇಲ್ಲ. ಆದುದರಿಂದ ಜೀವಿಗಳಿಂದ ಋಣಮುಕ್ತನಾಗಲು ಭೂತಯಜ್ಞ' ಮಾಡುವುದು ಅತ್ಯಂತ ಅವಶ್ಯಕವಾಗಿದೆ.

'ದೇವೇಭ್ಯಶ್ಚ ಹುತಾದನ್ನಾತ್
ಶೇಷಾದ್ ಭೂತ ಬಲಿಂ ಹರೇತ್
ಅನ್ನಂ ಭೂಮೌ ಶ್ವಚಾಂಡಾಲ
ವಾಯಸೇ ಭ್ಯಶ್ಚ ನಿಕ್ಷಿಪೇತ್' (ಯಾ.ಸ್ಮೃ)

'ದೇವಯಜ್ಞ ಮಾಡಿದ ನಂತರ ಉಳಿದಿರುವ ಅನ್ನವನ್ನು ಜೀವಿಗಳಿಗಾಗಿ ಭೂಮಿಯ ಮೇಲೆ ಹಾಕಬೇಕು. ಈ ಅನ್ನವನ್ನು ಪಶು, ಪಕ್ಷಿ ಇತ್ಯಾದಿಗಳು ಸ್ವೀಕರಿಸುತ್ತವೆ.'

ಭೂತಯಜ್ಞದಿಂದ ಕ್ರಿಮಿ, ಕೀಟ, ಪಶು, ಪಕ್ಷಿ -- ಇತ್ಯಾದಿಗಳು ತೃಪ್ತಿ ಹೊಂದುತ್ತವೆ.

## ೪. ಪಿತೃಯಜ್ಞ

ಅರ್ಯರು ಇತ್ಯಾದಿ ನಿತ್ಯ ಪಿತೃಗಳಿಗಾಗಿ ಹಾಗೂ ಪರಲೋಕಗಾಮಿ ನೈಮಿತ್ತಿಕ ಪಿತೃಗಳಿಗಾಗಿ ಪಿಂಡ ಪ್ರದಾನ ಇತ್ಯಾದಿಗಳಿಂದ ಮಾಡಲ್ಪಡುವ ಸೇವಾ ರೂಪ ಯಜ್ಞವನ್ನು 'ಪಿತೃಯಜ್ಞ' ಎಂದು ಕರೆಯುತ್ತಾರೆ.

ಸನ್ಮಾರ್ಗ ಪ್ರವರ್ತಕ ತಂದೆ -- ತಾಯಿಗಳ ಕೃಪೆಯಿಂದ ಅಸನ್ಮಾರ್ಗದಿಂದ ದೂರವಾಗಿ ಮಾನವನು ಜ್ಞಾನದ ಪ್ರಾಪ್ತಿ ಪಡೆಯುವನು. ಧರ್ಮ, ಅರ್ಥ, ಕಾಮ, ಮೋಕ್ಷಾದಿ ಸಕಲ ಪದಾರ್ಥಗಳನ್ನು ಪಡೆಯಲು ಮುಕ್ತನಾಗಿರುವನು. ಇಂತಹ ದಯಾಳು ಪಿತೃಗಳ ತೃಪ್ತಿಗಾಗಿ, ಅವರುಗಳ ಸಮ್ಮಾನಕ್ಕಾಗಿ, ತಮ್ಮ ಕೃತಜ್ಞತೆಯನ್ನು ತೋರಿಸುವುದಕ್ಕಾಗಿ ಹಾಗೂ ಅವರುಗಳಿಂದ ಋಣಮುಕ್ತನಾಗುವುದಕ್ಕಾಗಿ 'ಪಿತೃಯಜ್ಞ'ಮಾಡುವುದು ಅತ್ಯಂತ ಆವಶ್ಯಕವಾಗಿದೆ. ಪಿತೃಯಜ್ಞದಿಂದ ಸಮಸ್ತ ಲೋಕಗಳ ತೃಪ್ತಿ ಹಾಗೂ ಪಿತೃಗಳ ತುಷ್ಟಿಯ ಅಭಿವೃದ್ಧಿಯಾಗುತ್ತದೆ.

## ೫. ಮನುಷ್ಯಯಜ್ಞ

ಭಯಾನಕ ಹಸಿವಿನಿಂದ ಪೀಡಿತನಾದ ವ್ಯಕ್ತಿಯೊಬ್ಬನು ಮನೆಗೆ ಬಂದಾಗ, ಅಂತಹವನಿಗೆ ಭೋಜನಾದಿಗಳ ನೀಡಿ ಮಾಡುವ ಸೇವೆಗೆ 'ಮನುಷ್ಯಯಜ್ಞ' ಎಂದು ಕರೆಯುತ್ತಾರೆ.

ಅತಿಥಿಯು ಮನೆಗೆ ಬಂದಾಗ, ಅವನು ಯಾವುದೇ ಸಂಪ್ರದಾಯ ಹಾಗೂ ಜಾತಿಯವನಾಗಿರಲಿ, ಅಂತಹವನನ್ನು ಪೂಜ್ಯನೆಂದು ತಿಳಿದು, ಅವನಿಗೆ ಅರ್ಘ್ಯಪಾದ್ಯಾದಿಗಳನ್ನು ನೀಡಿ, ಪೂಜೆ ಮಾಡಿ, ಅವನಿಗೆ ಅನ್ನವನ್ನು ನೀಡಬೇಕು. ಇದರ ಸಮರ್ಥನೆಗಾಗಿ ಮನುವು ತನ್ನ ಸ್ಮೃತಿಯಲ್ಲಿ ಮೂರನೇ ಅಧ್ಯಾಯದಲ್ಲಿ ವಿಸ್ತೃತರೂಪದ ವಿವರಗಳನ್ನು ನೀಡಿದ್ದಾನೆ. ಪ್ರಪಂಚದ ಎಲ್ಲ ಸಮಾಜಗಳವರೂ ಅತಿಥಿ ಸೇವಾ ರೂಪದ ಧರ್ಮದ ಪರಿಪಾಲನೆ ಮಾಡುವುದು ಅತ್ಯಂತ ಅವಶ್ಯಕ.

ಮೊದಲನೆಯದಾಗಿ, ಪ್ರಾರಂಭದ ಹಂತದಲ್ಲಿ ಮಾನವನು ತನ್ನ ಶರೀರ ಮಾತ್ರದ ಸುಖದಿಂದ ತನ್ನನ್ನು ತಾನು ಸುಖೀ ಎಂದು ತಿಳಿಯುವನು. ನಂತರ ತಮ್ಮ ಪುತ್ರ, ಕಳತ್ರ, ಮಿತ್ರಾದಿಗಳನ್ನು ಸುಖವಾಗಿರುವುದನ್ನು ನೋಡಿ, ಸುಖಿಗಳಾಗಿರುತ್ತಾರೆ. ತದನಂತರ ಸ್ವದೇಶವಾಸಿಗಳು ಸುಖಿಗಳಾಗಿರುವುದನ್ನು ನೋಡಿ ಸುಖಿಗಳಾಗಿರುತ್ತಾರೆ. ಇದರ ನಂತರ ಪೂರ್ಣ ಜ್ಞಾನವನ್ನು ಪಡೆದು, ಸಮಸ್ತ ಲೋಕ ಸಮೂಹ ಸುಖಿಯಾಗಿರುವುದನ್ನು ನೋಡಿ, ಸುಖಿಯಾಗಿರುತ್ತಾನೆ. ಆದರೆ ಪ್ರಸ್ತುತ ಸಮಯದಲ್ಲಿ ವ್ಯಕ್ತಿಯು ಎಲ್ಲ ಜೀವಿಗಳ ಸೇವೆಯನ್ನು ಮಾಡಲಾರ. ಆದುದರಿಂದ ಯಥಾಶಕ್ತಿ ಮಾನವನ ಸೇವೆ ಮಾಡುವುದೇ 'ಮನುಷ್ಯಯಜ್ಞ' ಎಂದು ಕರೆಯಲಾಗುತ್ತದೆ. ಈ ಮನುಷ್ಯಯಜ್ಞದಿಂದ ಧನ, ಆಯುಸ್ಸು, ಯಶ ಹಾಗೂ ಸ್ವರ್ಗ ಇತ್ಯಾದಿಗಳು ದೊರೆಯುತ್ತವೆ.

(ಸಾಧಾರ)



# ಪುರಾಣಗಳ ಹಿರಿಮೆ

---ವಿ. ಕೆ. ವಿಶ್ವೇಶ್ವರ.

ತುಲಸೀಕಾನನಂ ಯತ್ರ
ಯತ್ರ ಪದ್ಮವನಾನಿ ಚ
ಪುರಾಣಪಠನಂ ಯತ್ರ
ತತ್ರ ಸನ್ನಿಹಿತೋ ಹರಿಃ

ಅಂದರೆ, ಪುರಾಣಪಠನ ನಡೆಯುತ್ತಿರುವಲ್ಲಿ ಶ್ರೀಹರಿಯು ನೆಲೆಸಿರುತ್ತಾನೆಂದಾಯಿತು. ಜತೆಗೇ, ಪುರಾಣಗಳಿಗೆ ನೀಡಲಾಗಿರುವ ಮನ್ನಣೆಯ ಮಣೆಯನ್ನೂ ಸೂಚಿಸುತ್ತದೆ ಈ ಶ್ಲೋಕ.

ಹಾಗಿದ್ದರೆ, ಪುರಾಣವೆಂದರೆ ಏನು? 'ಪುರಾ ಅಪಿ ನವಂ ಪುರಾಣಂ' -- ಹಳೆಯದಾಗಿದ್ದರು ನವೀನತೆಯಿಂದ ಕೂಡಿರುವುದು ಪುರಾಣ. 'ಪುರಾಣಮಾಖ್ಯಾನಂ ಪುರಾಣಂ' --ಪ್ರಾಚೀನವಾದ ಕಥೆಗಳಿಂದ ಘಟನೆಗಳಿಂದ ಕೂಡಿರುವುದು ಪುರಾಣ. ಹಾಗಂತ ಪುರಾಣಗಳಲ್ಲಿ ಬರೇ ಕಥೆಗಳು ಮಾತ್ರ ಇರುವವೆಂದು ತಿಳಿದರೆ ತಪ್ಪು. ಪುರಾಣಗಳಲ್ಲಿಲ್ಲದ ಜ್ಞಾನವೇ ಇಲ್ಲ. ಸಕಲ ತಿಳುವಳಿಕೆಗಳ ಭಂಡಾರಗಳವು. ಆದ್ದರಿಂದ, "ಪುರಾಣಗಳಲ್ಲಿ ಏನುಂಟು?" ಎಂದು ಕೇಳಿದವರಿಗೆ, "ಏನಿಲ್ಲ? " ಎಂಬ ಪ್ರಶ್ನೆಯೇ ಉತ್ತರವಾಗುತ್ತದೆ. ಈ ಮಾತಿಗೆ ಒಂದು ಸಣ್ಣ ದೃಷ್ಟಾಂತವನ್ನು ಕೊಡಬಹುದು. ಸಾಮಾನ್ಯ ತಿಳುವಳಿಕೆಯ ಪ್ರಕಾರ, 'ಅಷ್ಟಾಧ್ಯಾಯಿ' ಯೊಂದೇ ವ್ಯಾಕರಣದ ಕುರಿತಾದ ಪರಿಪೂರ್ಣಗ್ರಂಥ. ಆದರೆ, ನಾರದ ಪುರಾಣದಲ್ಲಿ ವ್ಯಾಕರಣದ ಶ್ಲೋಕಬದ್ಧವಾದ ವಿವರಣೆ ಎಷ್ಟು ಸೊಗಸಾಗಿ, ಸಮಗ್ರವಾಗಿ ಇದೆಯೆಂದರೆ, ಅದನ್ನು ಮಸ್ತಕಗತ ಮಾಡಿಕೊಂಡವನು ಶ್ರೇಷ್ಠ ವೈಯಾಕರಣಿಯಾದಂತೆಯೇ!

ರಾಜಕಾರಣ, ಧರ್ಮನೀತಿ, ಸಮಾಜವಿಜ್ಞಾನ, ಇತಿಹಾಸ, ಭೂಗೋಲ, ಖಗೋಲ ಶಾಸ್ತ್ರ, ಆಯುರ್ವೇದ ಶಾಸ್ತ್ರ, ಅಲಂಕಾರ ಶಾಸ್ತ್ರ, ವ್ಯಾಕರಣ, ಜ್ಯೋತಿಷ್ಯ ಶಾಸ್ತ್ರ -- ಇತ್ಯಾದಿ ಸಕಲ ವಿದ್ಯೆಗಳನ್ನೂ ಪುರಾಣಗಳಲ್ಲಿ ಪ್ರತಿಪಾದಿಸಲಾಗಿದೆ. ಆದ್ದರಿಂದ, ನಮ್ಮ ಸಂಸ್ಕೃತಿಯ ಕುರಿತಾದ ವಿಶಿಷ್ಟ ಜ್ಞಾನಪುರಾಣಗಳ ಅಧ್ಯಯನದಿಂದ ಪ್ರಾಪ್ತವಾಗುತ್ತದೆ.

ಬ್ರಹ್ಮವಿಷ್ಣರ್ಕರುದ್ರಾಣಾಂ
ಮಾಹಾತ್ಮ್ಯಂ ಭುವನಸ್ಯ ಚ
ಸ ಸಂಹಾರಪ್ರದಾನಾಂ ಚ
ಪುರಾಣೇ ಪಂಚವರ್ಣಕೇ
ಧರ್ಮಶ್ಚಾರ್ಥಶ್ಚ ಕಾಮಶ್ಚ
ಮೋಕ್ಷಶ್ಚೈವಾತ್ರ ಕೀರ್ತ್ಯಂತೇ
ಸರ್ವೇಷ್ವಪಿ ಪುರಾಣೇಷು
ಯದ್ವಿರುದ್ಧಂ ಚ ಯತ್ಫಲಂ

ಪಂಚಲಕ್ಷಣಗಳಿಂದ ಕೂಡಿರುವ ಎಲ್ಲ ಪುರಾಣಗಳಲ್ಲೂ ಸೃಷ್ಟಿ -- ಲಯಗಳಿಗೆ ಕಾರಣರಾದ ಬ್ರಹ್ಮ -- ವಿಷ್ಣು -- ಸೂರ್ಯ -- ರುದ್ರ ಹಾಗೂ ಭುವನಗಳ ಮಹಿಮೆಗಳ ವರ್ಣನೆಯಿದೆ. ಧರ್ಮ, ಅರ್ಥ, ಕಾಮ, ಮೋಕ್ಷಗಳ ವಿಸ್ತೃತ ವಿವೇಚನೆಯೂ ಅವುಗಳ ವಿರೋಧ ಆಚರಣೆಯ ಫಲಗಳ ಪ್ರತಿಪಾದನೆಯೂ ಪುರಾಣಗಳಲ್ಲಿ ದೊರೆಯುತ್ತದೆ.

ಪುರಾಣನ್ಯಾಯ ಮೀಮಾಂಸ
ಧರ್ಮಶಾಸ್ತ್ರಾಂಗ ಮಿಶ್ರಿತಃ
ವೇದಾ ಸ್ಥಾನಾನಿ ವಿದ್ಯಾನಾಂ
ಚ ಧರ್ಮಸ್ಯ ಚತುರ್ದಶ

ಹದಿನಾಲ್ಕು ವಿದ್ಯೆಗಳಲ್ಲಿ ಪ್ರಥಮ ಸ್ಥಾನದಲ್ಲಿರುವ ಪುರಾಣಗಳಲ್ಲಿ, ಎಲ್ಲ ಮಾನವರು ಆಚರಿಸಬೇಕಾದಂತಹ ಧರ್ಮ ಮತ್ತು ನ್ಯಾಯಮೀಮಾಂಸೆ ಅಡಕವಾಗಿದೆ.

ಸನಾತನ ಸಂಸ್ಕೃತಿಯ ಆಧಾರಸ್ತಂಭಗಳಲ್ಲಿ ವೇದಗಳ ನಂತರ ಪುರಾಣಗಳು ಮುಖ್ಯವಾಗಿ ಬರುತ್ತವೆ. ಐದನೆಯ ವೇದವಾಗಿಯೇ ಅವು ಗುರುತಿಸಲ್ಪಡುತ್ತವೆ.

ಇತಿಹಾಸ ಪುರಾಣಾನಿ
ಪಂಚಮಂ ವೇದಮೀಶ್ವರಃ
ಸರ್ವೇಭ್ಯ ಏವ ವಕ್ತ್ರೇಭ್ಯಃ
ಸಸೃಜೇ ಸರ್ವದರ್ಶನಃ

ಸಮರ್ಥನೂ, ಸರ್ವಜ್ಞನೂ ಆದ ಬ್ರಹ್ಮದೇವನು ತನ್ನೆಲ್ಲ ಮುಖಗಳ ಮೂಲಕವೂ ಇತಿಹಾಸ ಮತ್ತು ಪುರಾಣಗಳೆಂಬ ಐದನೆಯ ವೇದವನ್ನು ಪ್ರಕಟಪಡಿಸಿದನು. ರಾಮಾಯಣ ಮತ್ತು ಮಹಾಭಾರತಗಳನ್ನು ಒಟ್ಟಾಗಿ ಇತಿಹಾಸ ಎಂದು ಕರೆಯಲಾಗುತ್ತವೆ.

ಮತ್ಸ್ಯಪುರಾಣದ ಒಂದು ಪ್ರಸಿದ್ಧ ಮಾತಿನಂತೆ, ಪುರಾಣಗಳು ಸರ್ವಶಾಸ್ತ್ರಗಳಲ್ಲೂ ಪ್ರಪ್ರಥಮವಾಗಿ ಬ್ರಹ್ಮನಿಂದ ಸ್ಮೃತವಾದವುಗಳು.

ಪುರಾಣಂ ಸರ್ವಶಾಸ್ತ್ರಾಣಾಂ
ಪ್ರಥಮಂ ಬ್ರಹ್ಮಣಾ ಸ್ಮೃತಂ
ಅನಂತರಂ ಚ ವಕ್ತ್ರೇಭ್ಯೋ
ವೇದಾಃ ತಸ್ಯ ವಿನಿರ್ಗತಾಃ

ವೇದಗಳಿಗೆ ಹೋಲಿಸಿದರೆ ಪುರಾಣಗಳ ಅಭಿವ್ಯಕ್ತಿ ಮೊದಲು ಆಯಿತು. ವೇದಗಳಿಗಿಂತಲೂ ಪುರಾಣಗಳು ಹಳೆಯವುಗಳು, ಪುರಾತನವಾದವುಗಳು. ಆದ್ದರಿಂದಲೇ ಅವುಗಳಿಗೆ ಪುರಾಣಗಳು ಎಂಬ ಹೆಸರು.

"ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬ್ರುಂಹಯೇತ್" ಎಂದು ಮಹಾಭಾರತವು ಸಾರುತ್ತದೆ. ವೇದಗಳ ವ್ಯಾಖ್ಯಾನಕ್ಕೆ ರಾಮಾಯಣ -- ಮಹಾಭಾರತ ಸ್ವರೂಪೀ ಇತಿಹಾಸ ಮತ್ತು ಅಷ್ಟಾದಶ ಪುರಾಣಗಳು -- ಇವುಗಳ ಜ್ಞಾನ ಅತ್ಯವಶ್ಯವಾಗಿ ಇರಲೇಬೇಕು. "ವೇದಾಃ ಪ್ರತಿಷ್ಠಿತಾಃ ಸರ್ವೇ ಪುರಾಣೇಷ್ವೇವ ಸರ್ವದಾ" -- ವೇದಗಳು ಎಲ್ಲ ಪುರಾಣಗಳಲ್ಲೂ ಒಳಗೊಂಡಿವೆ ಎಂಬುದು ನಾರದ ಪುರಾಣದ ಹೇಳಿಕೆ. ವೇದಗಳ ಅಧ್ಯಯನಕ್ಕೆ ಪುರಾಣಗಳ ಜ್ಞಾನದ ಭದ್ರ ಬುನಾದಿ ಅಗತ್ಯ.

ಯೋ ವಿದ್ಯಾಚ್ಚತುರೋ ವೇದಾನ್
ಸಾಂಗೋಪನಿಷದೋ ದ್ವಿಜಃ
ನ ಚೇತ್ ಪುರಾಣಂ ಸ ವಿದ್ಯಾತ್
ನೈವ ಸ ಸ್ಯಾದ್ ವಿಚಕ್ಷಣಃ

ಅಂದರೆ, ಯಾವನೇ ಒಬ್ಬ ದ್ವಿಜನು ಪುರಾಣಗಳ ಅರಿವು ಇಲ್ಲದವನಾಗಿದ್ದರೆ ಅವನು ಪಂಡಿತನೆನಿಸಲು ಸಾಧ್ಯವಿಲ್ಲ.

ಶತಕೋಟಿ ಶ್ಲೋಕಗಳಷ್ಟು ವಿಸ್ತಾರವಾದ ಪುರಾಣಗಳನ್ನು ದ್ವಾಪರಯುಗದಲ್ಲಿ ಭಗವಾನ್ ವೇದವ್ಯಾಸರು ಹದಿನೆಂಟು ಭಾಗಗಳಾಗಿ ವಿಂಗಡಿಸಿ, ನಾಲ್ಕು ಲಕ್ಷ ಶ್ಲೋಕಗಳಲ್ಲಿ ಸಂಕ್ಷೇಪಿಸಿ ಸಂಗ್ರಹಿಸಿದರು. ಆದ್ದರಿಂದ ಅವರು ಪುರಾಣಗಳ ಸಂಪಾದಕರೇ ಹೊರತು ರಚಯಿತರಲ್ಲ. ವೇದಗಳ ಹಾಗೆ ಪುರಾಣಗಳೂ ಅನಾದಿ ಎಂಬುದಾಗಿ ಭಾಗಿಸಲಾ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ-ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.

ಗಿದ್ದು ಅವುಗಳ ರಚನಕಾರರು ಯಾರೋ ಗೊತ್ತಿಲ್ಲ. ಸೃಷ್ಟಿಕರ್ತ ಬ್ರಹ್ಮನೂ ಅವುಗಳ ಸ್ಮರಣೆಯನ್ನಷ್ಟೇ ಮಾಡಿದ್ದಾನೆ. ಜೀವನವಿಡೀ ಪಠಿಸಿದರೂ ಮುಗಿಯದಷ್ಟು ಬೃಹತ್ತಾಗಿದ್ದ ಪುರಾಣಗಳನ್ನು ಸಂಕ್ಷೇಪಿಸಿದ ವ್ಯಾಸರಿಗೆ ನಾವೆಷ್ಟು ಋಣಿಗಳಾಗಿದ್ದರೂ ಕಡಿಮೆಯೇ.

ಪದ್ಮಪುರಾಣವು ಪುರಾಣಗಳ ಮಹಿಮೆಯನ್ನು ಹೀಗೆ ವಿವರಿಸುತ್ತದೆ--

ಪುರಾಣಂ ಸರ್ವತೀರ್ಥೇಷು
ತೀರ್ಥಂ ಚಾಧಿಕಮುಚ್ಯತೇ
ಯಸ್ಯೈಕ ಪಾದಶ್ರವಣಾತ್
ಹರಿರೇವ ಪ್ರಸೀದತಿ

ಸಮಸ್ತ ತೀರ್ಥಗಳಲ್ಲಿ ಶ್ರೇಷ್ಠ ತೀರ್ಥವಾಗಿರುವ ಪುರಾಣಗಳ ಒಂದು ಪಾದದ ಶ್ರವಣದಿಂದಲೇ ಶ್ರೀಹರಿಯು ಪ್ರಸನ್ನನಾಗುತ್ತಾನೆ.

ಯಥಾ ಸೂರ್ಯವಪುರ್ಭೂತ್ವಾ
ಪ್ರಕಾಶಾಯ ಚರೇತ್ ಹರಿಃ
ಸರ್ವೇಷಾಂ ಜಗತಾಮೇವ
ಹರಿರಾಲೋಕ ಹೇತವೇ
ತಥೈವಾಂತಃ ಪ್ರಕಾಶಾಯ
ಪುರಾಣಾವಯವೋ ಹರಿಃ
ವಿಚರೇತ್ ಇಹ ಭೂತೇಷು
ಪುರಾಣಂ ಪಾವನಂ ಪರಂ

ಯಾವ ರೀತಿ ಇಡೀ ಬಾಹ್ಯ ಜಗತ್ತನ್ನು ಬೆಳಗಿಸುವುದಕ್ಕಾಗಿ ಹರಿಯು ಸೂರ್ಯನ ರೂಪದಲ್ಲಿ ಲೋಕ ಸಂಚಾರವನ್ನು ಮಾಡುವನೋ, ಅದೇ ರೀತಿಯಲ್ಲಿ ಪುರಾಣಸ್ವರೂಪಿಯಾದ ಹರಿಯು ಸಕಲ ಭೂತಗಳ ಅಂತಃಕರಣದಲ್ಲಿ ಜ್ಞಾನದ ಬೆಳಕನ್ನು ಹರಿಸುವುದಕ್ಕಾಗಿ ಸಂಚರಿಸುತ್ತಿರುತ್ತಾನೆ. ಒಟ್ಟಿನಲ್ಲಿ ಪುರಾಣಗಳು ಪಾವಿತ್ರ್ಯವನ್ನು ಬೆಳೆಸುವ ಪ್ರಮುಖ ಸಾಧನಗಳಾಗಿವೆ.

ಆದ್ದರಿಂದ, ಭಗವಂತನ ಸಾಕ್ಷಾತ್ಕಾರಕ್ಕಾಗಿ ಮನೋಸಂಕಲ್ಪವನ್ನು ಮಾಡಿಕೊಂಡವರು ನಿತ್ಯ ಶ್ರೀಕೃಷ್ಣರೂಪೀ ಪುರಾಣಗಳ ಶ್ರವಣವನ್ನು ಮಾಡಬೇಕು.

ತಸ್ಮಾದ್ಯದಿ ಹರೇಃ ಪ್ರೀತೇಃ
ಉತ್ಪಾದೇ ಧೀಯತೇ ಮತಿಃ
ಶ್ರೋತವ್ಯಮನಿಶಂ ಪುಂಭಿಃ
ಪುರಾಣಂ ಕೃಷ್ಣರೂಪಿಣಃ

ಪುರಾಣಗಳಿಗೆ ಐದು ಲಕ್ಷಣಗಳಿವೆ.

ಸರ್ಗಶ್ಚ ಪ್ರತಿಸರ್ಗಶ್ಚ
ವಂಶೋ ಮನ್ವಂತರಾಣಿ ಚ
ವಂಶಾನುಚರಿತಂ ಚೈವ
ಪುರಾಣಂ ಪಂಚಲಕ್ಷಣಂ

ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ್ರೆ -- ಇವುಗಳೇ ಆ ಐದು ಲಕ್ಷಣಗಳು. ಪದ್ಮಪುರಾಣವು ಹದಿನೆಂಟು ಪುರಾಣಗಳಲ್ಲಿ ಅತ್ಯಂತ ಮಹತ್ವಪೂರ್ಣವಾದುದಾಗಿದೆ.

'ಏಕಂ ಪುರಾಣಂ ರೂಪಂ
ತತ್ರ ಪಾದ್ಮಂ ಪರಂ ಮಹತ್'

ಎಂದು ಪ್ರಾರಂಭವಾಗುವ ಪದ್ಮಪುರಾಣದ ಶ್ಲೋಕ ಸರಣಿಯೊಂದು ಹದಿನೆಂಟು ಪುರಾಣಗಳೂ ಒಬ್ಬನೇ ಬ್ರಹ್ಮನ ವಿವಿಧ ಅವಯವಗಳಾಗಿವೆ ಎಂದು ವರ್ಣಿಸುತ್ತದೆ. ಬ್ರಹ್ಮ ಪುರಾಣ -- ಭಗವಂತನ ಶಿರ; ಪದ್ಮಪುರಾಣ -- ಹೃದಯ; ವಿಷ್ಣುಪುರಾಣ -- ಬಲಭುಜ; ಶಿವಪುರಾಣ -- ಎಡಭುಜ; ಭಾಗವತ ಪುರಾಣ -- ತೊಡೆಗಳು; ನಾರದೀಯ ಪುರಾಣ -- ನಾಭಿ; ಮಾರ್ಕಂಡೇಯ ಪುರಾಣ -- ಬಲಚರಣ; ಅಗ್ನಿಪುರಾಣ -- ಎಡಚರಣ; ಭವಿಷ್ಯ ಪುರಾಣ -- ಬಲ ಮೊಣಕಾಲು; ಬ್ರಹ್ಮವೈವರ್ತ ಪುರಾಣ -- ಎಡ ಮೊಣಕಾಲು; ಸ್ಕಂದ ಪುರಾಣ -- ರೋಮಗಳು; ವಾಮನ ಪುರಾಣ -- ತ್ವಚೆ; ಕೂರ್ಮ ಪುರಾಣ -- ಪೃಷ್ಠ; ಮತ್ಸ್ಯಪುರಾಣ -- ಮೇದಸ್ಸು; ಗರುಡ ಪುರಾಣ -- ಮಜ್ಜೆ ಹಾಗೂ ಬ್ರಹ್ಮಾಂಡ ಪುರಾಣ -- ಅಸ್ಥಿ. ಹೀಗೆ ಪುರಾಣಗಳಿಗೂ ಬ್ರಹ್ಮನಿಗೂ ಅಭೇದವನ್ನು ಕಲ್ಪಿಸಲಾಗಿದೆ.

ಪುರಾಣಗಳನ್ನು ಕೇಳುವುದಕ್ಕೂ ಅರ್ಹತೆ ಬೇಕು. ಅಪಾತ್ರರಿಗೆ ಪುರಾಣಶ್ರವಣ ಮಾಡಿಸಿದರೆ ಅವುಗಳ ಅರ್ಥ ಅನರ್ಥವಾದೀತು.

ಪುರಾಣಗಳ ಶ್ರವಣದಿಂದ ಏನು ಲಾಭ ಎಂಬುದನ್ನು ಹೀಗೆ ಮನೋಹರವಾಗಿ ವರ್ಣಿಸಲಾಗಿದೆ.

ಯಥಾ ಪಾಪಾನಿ ಪೂಯಂತೇ
ಗಂಗಾವಾರಿ ವಿಗಾಹನಾತ್
ತಥಾ ಪುರಾಣಶ್ರವಣಾತ್
ದುರಿತಾನಾಂ ವಿನಾಶನಂ

ಭಾಗೀರಥಿಯ ಒಡಲಲ್ಲಿ ಸ್ನಾನ ಮಾಡಿದಾಗ ಹೇಗೆ ಪಾಪಗಳೆಲ್ಲ ತೊಳೆದುಹೋಗುತ್ತವೆಯೋ, ಅದೇ ರೀತಿಯಲ್ಲಿ ಪುರಾಣಶ್ರವಣದಿಂದ ದುರಿತಗಳೆಲ್ಲ ನಾಶವಾಗಿ ಹೋಗುತ್ತವೆ.

ಪುಣ್ಯ ಸಂಪಾದನೆಗೆ ಅತ್ಯಂತ ಸುಲಭ ಮಾರ್ಗ ಇನ್ನಾವುದಿದೆ?

ಅನಾಯಾಸೇನ ಯಃ ಪುಣ್ಯಾನ್
ಇಚ್ಛತೀಹ ದ್ವಿಜೋತ್ತಮಾಃ
ಶ್ರೋತವ್ಯಾನಿ ಪುರಾಣಾನಿ
ತೇನ ವೈ ಭಕ್ತಿಭಾವತಃ

"ಅನಾಯಾಸವಾಗಿ ಪುಣ್ಯವನ್ನು ಬಯಸುವವರು ಭಕ್ತಿಭಾವ ತುಂದಿಲರಾಗಿ ಪುರಾಣಶ್ರವಣವನ್ನು ಮಾಡಿದರೆ ಸಾಕು" --ಎಂಬುದಾಗಿ ಸೂತ ಮಹಾಮುನಿಗಳು ಋಷಿ ಸಮೂಹಕ್ಕೆ ತಿಳಿಸಿದ್ದರು.

ಆದ್ದರಿಂದ, ಶ್ರೇಷ್ಠ ವ್ಯಕ್ತಿಗಳ ಕಥೆಯನ್ನು, ಮಂಗಲಕರವಾದ ಇತಿಹಾಸ -- ಪುರಾಣಗಳನ್ನು, ಹೇಳುತ್ತಾ--ಕೇಳುತ್ತಾ ಆಯುಷ್ಯವನ್ನು ಕಳೆಯುವುದು ಅತ್ಯಂತ ಸುಖಪ್ರದವಲ್ಲವೇ?

"ಆಯುಷ್ಯತಾಂ ಕಥಾಂ ಕೀರ್ತಯಂತೋ
ಮಾಂಗಲ್ಯಾನೀತಿಹಾಸ ಪುರಾಣಾನಿ......."

ನ ದಾಂಭಿಕಾಯ ಪಾಪಾಯ
ದೇವಗುರ್ವತ್ಯ....................
ದೇಯಂ ಕದಾಪಿ ಸಾಧೂನಾಂ
ದ್ವೇಷಿಣೇ ನ ಶಠಾಯ ಚ
ಶಾಂತಾಯ ರಾಮಚಿತ್ತಾಯ
ಶುಶ್ರೂಷಾಭಿರತಾಯ ಚ
ನಿರ್ಮತ್ಸರಾಯ ಶುಚಯೇ
ದೇಯಂ ಸದ್ವೈಷ್ಣವಾಯ ಚ

ಡಾಂಭಿಕರಿಗೆ, ಪಾಪಕರ್ಮ ನಿರತರಾದವರಿಗೆ, ದೇವ -- ಗುರುಗಳ ನಿಂದಕರಿಗೆ, ಸಾಧು ಸಂತರನ್ನು ದ್ವೇಷಿಸುವವರಿಗೆ, ಕೆಟ್ಟ ಹಟವಾದಿಗಳಿಗೆ ಪುರಾಣಗಳನ್ನು ಉಪದೇಶಿಸಬಾರದು. ಶಾಂತ ಸ್ವಭಾವದವರಿಗೆ, ಸದಾ ಶ್ರೀರಾಮನಲ್ಲಿ ಮನಸ್ಸನ್ನು ಕೇಂದ್ರೀಕರಿಸುವವರಿಗೆ, ಸೇವೆ -- ಶುಶ್ರೂಷೆಗಳಲ್ಲಿ ನಿರತರಾದವರಿಗೆ, ನಿರ್ಮತ್ಸರಿಗಳೂ ಪವಿತ್ರರೂ ಆದವರಿಗೆ, ಒಳ್ಳೆಯ ವಿಷ್ಣು ಭಕ್ತರಿಗೆ ಪುರಾಣಗಳನ್ನು ಬೋಧಿಸಬೇಕು.

* * * * *

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಸಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟಗಳು ಹೀಗಿವೆ :--

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸದೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ. 3 ಲಕ್ಷ, ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುಲವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ, (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು ಒಂದು ಬಾರಿಗೆ 10 ಶತಾಂಶ ದಂತೆ; ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇ., ತಿರುಪತಿ.

# ದಾಸರ ಪದಗಳಲ್ಲಿ ಸ್ತ್ರೀ

---ಕೃಷ್ಣ. ಹುನಗುಂದ.

ಸಾಮಾಜಿಕ ಕಟ್ಟಳೆಗಳನ್ನು ರೂಪಿಸುವಲ್ಲಿ, ಅವುಗಳ ಭವ್ಯಅಭಿಪ್ರಾಯಗಳನ್ನು ರೂಢಿಸುವಲ್ಲಿ, ಅಲ್ಲದೇ ಒಂದು ಮನೆಯ ಆಧಾರಸ್ಥಂಭವೆಂದು ಕರೆಯಿಸಿಕೊಳ್ಳುವಲ್ಲಿ ಹೆಣ್ಣಿನ ಪಾತ್ರ ಹಿರಿದಾದದ್ದು, ಮತ್ತು ಅತ್ಯಂತ ಮಹತ್ವದ್ದು. ಈ ಹೆಣ್ಣಿನ ಪಾತ್ರದ ಹಿರಿಮೆಗರಿಮೆಗಳನ್ನು ತಮ್ಮಸಾಹಿತ್ಯದಲ್ಲಿ ಅತ್ಯಂತ ಸುಂದರವಾಗಿ, ದಟ್ಟವಾಗಿ, ಅಳವಡಿಸಿಕೊಂಡಿದ್ದವರು ಪ್ರಖ್ಯಾತ ಹರಿದಾಸರು.

ಸ್ತ್ರೀಯರನ್ನೇ ದೃಷ್ಟಿಯಲ್ಲಿಟ್ಟುಕೊಂಡು ಪದ, ಕೀರ್ತನೆಗಳ ಮೂಲಕ ತಿಳುವಳಿಕೆಯನ್ನು, ಸ್ತ್ರೀ ಧರ್ಮದ ವಿಶೇಷಗಳನ್ನು, ಅವಳು ಸಮಾಜದಲ್ಲಿ ನಡೆದುಕೊಳ್ಳಬೇಕಾದ ರೀತಿ ನೀತಿಗಳನ್ನು ಹರಿದಾಸರು ಅತೀ ಸರಳ ಹಾಗೂ ಸುಂದರವಾಗಿ ರಚಿಸಿದ್ದಾರೆ. ದಾಸಸಾರ್ವಭೌಮರಾದ ಪುರಂದರದಾಸರು ತಮ್ಮ ಕೀರ್ತನೆಯೊಂದರಲ್ಲಿ ಸ್ಪಷ್ಟವಾಗಿ--

ರಮಣನಿಲ್ಲದ ನಾರಿ
ಪರರ ಕಣ್ಣಿಕ್ಕೈ ಮಾರಿ
ಹಡೆದವರ ಎದೆ ಕೊರಳ
ಕೊಯ್ವಂಥ ಚೂರಿ

ಮಾತು ಕಲಿತರೆ ಏನು?
ಮಹಾಜಾಣೆಯಾದರೇನು?
ಚಾತುರ್ಯವಿದ್ದರೇನು
ಚೆಲುವೆಯಾದರೇನು?
ರಾಶಿ ಹಣವಿದ್ದರೇನು
ಏಸು ಪೇಳಿದರೇನು?

ಎಂದು ತುಂಬಾ ಸೊಗಸಾಗಿ, ತಾತ್ವಿಕವಾಗಿ ನಾರಿಯರನ್ನು ಎಚ್ಚರಿಸಿದರು. ಆಧುನಿಕ ಮಹಿಳೆಯರು ಈ ಪದಕ್ಕೆ ಪ್ರತಿಭಟಿಸಬಹುದು. ಸ್ತ್ರೀ ಪುರುಷ ಸಮಾನತೆಗಾಗಿ ಹೋರಾಡುತ್ತಿರುವ ಇಂದಿನ ದಿನಗಳಲ್ಲಿ ಸ್ತ್ರೀಯ ಪ್ರತಿಭಟನೆ ಮೇಲುನೋಟಕ್ಕೇ ಅವಶ್ಯಕ ಎನಿಸಬಹುದು.

ಆದರೆ ಪ್ರತಿಯೊಂದು ಕೃತಿಯನ್ನು ನೋಡುವಾಗ, ಅವಲೋಕಿಸುವಾಗ ಅದರ ಹಿಂದಿನ ಭಾವ ಏನು? ಆ ಕವಿ ಏನನ್ನು ಹೇಳ ಹೊರಟಿದ್ದಾನೆ? ಏಕೆ ಹೀಗೆ ಹೇಳಿದೆ? ಅವನ ಇಂಗಿತವೇನು? ಎಂದು ತಿಳಿದುಕೊಳ್ಳುವದು ಬಲು ಮುಖ್ಯ. ಆಧುನಿಕತೆಗೇ ಬಗ್ಗಿಹೋಗಿರುವ ನಮ್ಮಲ್ಲಿ ಐತಿಹಾಸಿಕ ಪ್ರಜ್ಞೆಯೇ ಕಡಿಮೆಯಾಗುತ್ತಿದೆಯೇನೋ ಎನಿಸುತ್ತದೆ. ಯಾಕೆಂದರೆ ಪ್ರತಿಯೊಂದನ್ನೂ ನಾವು ವೈಜ್ಞಾನಿಕ ದೃಷ್ಟಿಯಿಂದ ನೋಡುತ್ತಿದ್ದೇವೆಯೇ ಹೊರತು, ತಾತ್ವಿಕ ದೃಷ್ಟಿಯಿಂದ ಮಾತ್ರ ಅಲ್ಲ. ಸಮಾಜದಲ್ಲಿ ಗಂಡಿನ ಪಾತ್ರ ಹಿರಿದಾದದ್ದು. ಆದ್ದರಿಂದಲೇ ಪುರಂದರದಾಸರು ರಮಣ ಅಂದರೆ ಪುರುಷರನ್ನು ಪ್ರಧಾನವಾಗಿಟ್ಟುಕೊಂಡರು. ಹೀಗೆಂತ ಸ್ತ್ರೀಯರನ್ನು ತುಚ್ಛವಾಗಿ ಕಂಡು ಹೀಗೆಳೆಯಲೂ ಇಲ್ಲ.

"ಸುಗುಣೆಯರಿದ್ದೆಡೆ ಕೈ ಮುಗಿದು ಬನ್ನಿರೋ"

--ಎಂದವರು ಜಗನ್ನಾಥದಾಸರು. ಪುರಂದರ ದಾಸರಂತೂ ತಮ್ಮ ಒಂದು ಕೃತಿಯಲ್ಲಿ ಹೆಣ್ಣು ತನ್ನ ಸಂಪೂರ್ಣ ನಡತೆಯಿಂದ ಹೀಗೆ ಒಳ್ಳೆಯವಳಾಗುತ್ತಾಳೆ ಎಂದು ತಿಳಿಸುತ್ತಾ, ಸ್ತ್ರೀ ಹೇಗಿರಬೇಕಂದರೆ--

"ಹಣ್ಣಿನಂತೆ ಲಕ್ಷಣವಿರಬೇಕು
ಬಾಳೆ ಹಣ್ಣಿನ ರುಚಿಯಂತೆ ಗುಣವಿರಬೇಕು

..........................................................

ಸುಡುಗಾಡಿಗಳ ಮಾತು ಮರೆಯಲು ಬೇಕು
ನಡೆಗುಣದಲಿ ಪಾರ್ವತಿ ಸಮವಿರಬೇಕು
ಗತಿಯು ತನಗೆ ಪತಿ ಪ್ರಾಣವೆನಬೇಕು
ಯತಿ ಗುರು ಹಿರಿಯರಿಗೆ ನಮಿಸಬೇಕು
ವರಲಕ್ಷ್ಮಿಯಂದದಿ ದಯೆಯಿರಬೇಕು

ಎಂದು ಬೋಧಿಸುತ್ತಾ "ವರದ ಪುರಂದರ ವಿಠಲ ಮೆಚ್ಚಬೇಕು" ಎಂದು ಸಾರಿದರು. ಇಲ್ಲಿ ಪುರಂದರ ವಿಠಲನೇ ದಾಸರ ದೃಷ್ಟಿಯಲ್ಲಿ ಸರ್ವೋತ್ತಮ, ಭಗವಂತ, ಅವನೇ ಸರ್ವನಿಯಾಮಕ.

ಹೆಣ್ಣಿನ ಅಸಂಬಂಧ ನಡುವಳಿಕೆಯನ್ನು ಉಗ್ರವಾಗಿ ಖಂಡಿಸಿದರು. "ಯತ್ರ ನಾರ್ಯಂತು ಪೂಜ್ಯತೆ -- ತತ್ರ ರಮಂತಃ ದೇವತ, ಉಪವಿಶಂತಿ ಎಲ್ಲಿ ನಾರಿಯರು ಪೂಜಿಸಲ್ಪಡುತ್ತಾರೋ ಅಲ್ಲಿ ದೇವತೆಗಳ ಸನ್ನಿಧಾನವಿರುತ್ತದೆ ಎಂದು ನಂಬಿದ್ದ ಕಾಲ. ಇದನ್ನು ಹರಿದಾಸರು ಚೆನ್ನಾಗಿ ಅರಿತಿದ್ದರು. ಆದರೆ ಸ್ತ್ರೀಯರು ತಮ್ಮ ಪರಿಮಿತಿಯ ಚೌಕಟ್ಟಿನೊಳಗೇ ಇರಬೇಕು --ಎಂಬುದು ದಾಸರ ಆಶಯವಾಗಿತ್ತು. "ಮಾತೃಭ್ಯೋ ನಮಃ" ಎಂಬುದು ದಾಸರ ಪ್ರಥಮ ಪಂಕ್ತಿಯಾಗಿತ್ತು.

ತಮ್ಮದೇವರ ಬಾಯಲ್ಲಿಯೇ ತಂಗಿಯನ್ನು ಗುರಿಮಾಡಿಕೊಂಡು ಇಡೀ ಸ್ತ್ರೀಯರಿಗೇ ಬುದ್ಧಿ ಹೇಳಿಸಿದವರು ದಾಸರು.

ತಂಗಿಗ್ಹೇಳಿದ ಕೃಷ್ಣ ಚಂದದಲಿ ಬುದ್ಧಿ
ಅತ್ತೆಯ ಮನೆಯಲ್ಲಿ ಇರುವಂಥ ಸುದ್ಧಿ
ಪರರ ಒಡವೆಯ ಕಂಡು
ಮರುಳ ಮಾತಾಡದಿರು
ನೆರೆಹೊರೆಯವರಿಗೆ ನೀನು ತಲೆವಾಗಿ ನಡೆಯಮ್ಮ

..........................................................

ಇಪ್ಪರು ಅಂದರೂ ನಿಷ್ಠುರ ಮಾಡದಿರು
ಘಟ್ಟಿ ಮಾಡಮ್ಮ ನಿನ್ನ ಮನಸು
ಸೃಷ್ಟಿಯೊಳಗೆ ನಮ್ಮ ಪುರಂದರವಿಠಲನ್ನ
ಶ್ರೇಷ್ಠನಾದ ಕೃಷ್ಣನ ತಂಗಿಯೆಂದೆನಿಸೇ

ಎಂದು ಮಾರ್ಮಿಕವಾಗಿ ನುಡಿದಿರುವರು. ಸ್ತ್ರೀಯರು ಕೆಂಡವಿದ್ದಂತೆ, ಅವರನ್ನು ಕೆಣಕಲು ಹೋಗುವುದು ಅವಸಾನ ಪಡೆದಂತೆ ಎಂದು ಪುರುಷರನ್ನೂ ಕೂಡ ದಾಸರು ಎಚ್ಚರಿಸಿದರು.



**ಓದಿರಿ.** **ಓದಿಸಿರಿ.**

# ಸಪ್ತಗಿರಿ

ತಿರುಮಲೆ -- ತಿರುಪತಿ ದೇವಸ್ಥಾನಗಳ ಧಾರ್ಮಿಕ ಮಾಸಪತ್ರಿಕೆ ಸಪ್ತಗಿರಿ.

ತೆಲುಗು ತಮಿಳು ಕನ್ನಡ ಹಿಂದಿ ಆಂಗ್ಲ ಭಾಷೆಗಳಲ್ಲಿ ಬೇರೆ ಬೇರೆಯಾಗಿ ಪ್ರಕಟವಾಗುವ ಪತ್ರಿಕೆ.

ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ವಿಷಯಗಳೊಂದಿಗೆ ವಿಶೇಷಗಳೊಂದಿಗೆ ಪ್ರಕಟವಾಗುವ ಪತ್ರಿಕೆ.

ಸಪ್ತಗಿರಿ ಚಂದಾದಾರರಾಗ ಬಯಸುವವರು ಈ ಕೆಳಗಿನ ಸೂಚನೆಗಳನ್ನು ಗಮನಿಸಬೇಕೆಂದು ಪ್ರಾರ್ಥನೆ.

* ಸಪ್ತಗಿರಿಯ ವಾರ್ಷಿಕ ಚಂದಾ ಇಪ್ಪತ್ನಾಲ್ಕು ರೂಪಾಯಿಗಳು ಮಾತ್ರ. ಎಷ್ಟು ವರ್ಷದ ಚಂದಾ ಹಣವನ್ನಾದರೂ ತುಂಬಬಹುದು. (ಆಜೀವ ಸದಸ್ಯತ್ವವಿಲ್ಲ)
* ತಮ್ಮ ಚಂದಾ ಹಣವನ್ನು ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಎಂ.ಓ/ಡಿ.ಡಿ./ಪಿ.ಓ. ರೂಪದಲ್ಲಿ ಕಳುಹಿಸಿ (ಚೆಕ್‌ಗಳನ್ನು ಅಂಗೀಕರಿಸಲಾಗದು).
* ತಮಗೆ ಯಾವ ಭಾಷೆಯ ಸಪ್ತಗಿರಿ ಬೇಕೆಂಬುದನ್ನು ಸ್ಪಷ್ಟವಾಗಿ ಬರೆಯಿರಿ.
* ತಮ್ಮ ಪೂರ್ಣ ವಿಳಾಸವನ್ನು ಬಿಡಿಬಿಡಿಯಾದ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ. (ಎಂ. ಓ. ಕೂಪನ್ನಿನ ವಿಷಯ ಬರೆಯುವ ಸ್ಥಳದಲ್ಲಿ)
* ಚಂದಾ ಹಣ ತಲುಪಿದ ಮಾರನೆಯ ತಿಂಗಳಿನಿಂದ ಸಪ್ತಗಿರಿಯನ್ನು ಕಳುಹಿಸಲಾಗುವುದು.
* ಚಂದಾ ಹಣವನ್ನು ಕಳುಹಿಸಿದ 30 ದಿನಗಳಲ್ಲಿ ಸಪ್ತಗಿರಿ ತಮಗೆ ಬಾರದಿದ್ದಲ್ಲಿ ತಮ್ಮ ಎಂ.ಓ./ಡಿ.ಡಿ. ಕ್ರಮಸಂಖ್ಯೆ ದಿನಾಂಕ ಮೊದಲಾದ ವಿವರಗಳೊಂದಿಗೆ ಪೂರ್ಣವಿಳಾಸವನ್ನು ನೀಡಿ ಕಾಗದ ಬರೆಯಿರಿ.

ಈ ಮೊದಲೇ ಚಂದಾದಾರರಾದವರಿಗೆ ಸೂಚನೆಗಳು :

* ತಮ್ಮ ಚಂದಾ ಮೊಬಲಗು ಮುಗಿಯುವ ಒಂದು ತಿಂಗಳ ಮೊದಲೇ ಪುನಃ ಚಂದಾಹಣವನ್ನು ಇತರ ಕಾರಣಗಳಿಗಾಗಿ ಬರೆಯುವಾಗ ದಯವಿಟ್ಟು ತಮ್ಮ ಸದಸ್ಯತ್ವ ಸಂಖ್ಯೆಯನ್ನು ತಪ್ಪದೇ ತಮ್ಮ ವಿಳಾಸದೊಡನೆ ನಮೂದಿಸಿ ಬರೆಯಿರಿ.

ಸಂಪಾದಕರು :

*ಸಪ್ತಗಿರಿ*

ತಿ.ತಿ.ದೇ., ತಿರುಪತಿ.

**ಕೊಂಡು ಓದಿರಿ.** **ಕೊಂಡು ಓದಿಸಿರಿ.**

ಮರುಳು ಮಾನವನೇ ಕೇಳೊ
ಪರಸತಿಯ ಉರಿಯೆಂದು ನೋಡೋ ನಿತ್ಯ

ಎಂದೆನ್ನುತ್ತಾ--

ಮರುಳ ಯಮಲೋಕದಲ್ಲಿ ಕರೆದೊಯ್ದು
ಉರಿಗಂಬ ಅಪ್ಪಿಸುವರೋ
ಎಂದರು.

ನೋಡದಿರು ಪರಸ್ತ್ರೀಯರ ಎಂದು ಆರಂಭವಾಗುವ ಈ ಹಾಡು ಅತ್ಯಂತ ಅರ್ಥಪೂರ್ಣ.

ಒಂಟಿಯಲಿ ಹೆಂಡತಿಯ ಬಿಡುವಾತನಾಗಲಿ
ಮುಪ್ಪಿನಲಿ ಮದುವೆ ಮಾಡಿಕೊಳ್ಳುವವ
ಮೂರ್ಖ

ಎಂಬುದು ಮತ್ತೊಂದು ಎಚ್ಚರ ಪರಿದಾಸರದು.

"ಅತ್ತೆಯ ಮನೆ ಸೇರುವವಗೆ ಅಭಿಮಾನವುಂಟೆ"

ಎಂದು ಕನಕದಾಸರು ಸೂಕ್ಷ್ಮವಾಗಿ ಪುರುಷರಿಗೆ ಎಚ್ಚರಿಕೆ ಕೊಡುತ್ತಾ, ತಾನೇ ಸ್ವತಃ ದುಡಿದು ಅವಳನ್ನು ಸಾಕಬೇಕೆನ್ನುತ್ತಾರೆ. ಶಾಸ್ತ್ರವೂ ಇದನ್ನೇ ಹೇಳುತ್ತದೆ.

ದಾಸಸಾಹಿತ್ಯ ನಮಗೆ ಅಮೂಲ್ಯ ನಿಧಿಯಿದ್ದ ಹಾಗೆ. ಒಂದು ಕಾವ್ಯ, ಲೇಖನ, ಬರಹ ಶತಶತಮಾನಗಳಿಂದ ದಟ್ಟವಾಗಿ ತನ್ನ ತನವನ್ನು ಉಳಿಸಿಕೊಂಡು ಬರಬೇಕಾದರೆ ಅದರಲ್ಲಿ ಸತ್ವ ಜೀವಂತಿಕೆ ಇದ್ದರೆ ಮಾತ್ರ ಸಾಧ್ಯ. ನಮ್ಮ ಬದುಕಿನ ಮೌಲ್ಯಗಳೊಡನೆ ಎಚ್ಚರಿಕೆಯ ಗಂಟೆಯಂತೆ ಸ್ಪಂದಿಸುತ್ತ ದಾಸಸಾಹಿತ್ಯ ನಮ್ಮಲ್ಲಿಲ್ಲವೆ? ಅದನ್ನೇ ಹಿಯಾಳಿಸುವ ಪ್ರವೃತ್ತಿ ನಮ್ಮಲ್ಲಿ ಜಾಗೃತವಾಗುತ್ತಿದೆ. ಕೇವಲ ಸ್ತ್ರೀಯರನ್ನು ಮಾತ್ರ ಹಿಯಾಳಿಸಿ ದಾಸರು ಎಂದೂ ಬರೆಯಲಿಲ್ಲ ಹಾಡಲಿಲ್ಲ. ಎಲ್ಲ ವರ್ಗದ ಪುರುಷರನ್ನೂ ತಮ್ಮ ಕೃತಿಗಳ ಮುಖಾಂತರ ಎಚ್ಚರಿಸಿ ದಾರಿದೀವಿಗೆಯನ್ನೇ ಹಚ್ಚಿದ್ದಾರೆ ಶ್ರೀಹರಿದಾಸರು.

[ಪುರಂದರ ದಾಸರ ಇಡೀ ಸಾಹಿತ್ಯಕ್ಕೆ ಆರಂಭದ ಪದ ಜನಪ್ರಸಿದ್ಧವಾದದ್ದು. ಅಲ್ಲಿ ಹೆಣ್ಣಿನ ಗುಣಗರಿಮೆಗಳನ್ನು ಹೊಗಳಿ ಆಕೆಯ ಸಂತತಿ ಸಾವಿರವಾಗಲಿ ಎಂದು ಹಾರೈಸುತ್ತಾರೆ. "ಹೆಂಡತಿ ಸಂತತಿ ಸಾವಿರವಾಗಲಿ ದಂಡಿಗೆ ಬೆತ್ತ ಹಿಡಿಸಿದಳಯ್ಯ" ಎಂದು ತಮ್ಮ ಪೂರ್ವದ ಸ್ಥಿತಿಯಿಂದ ಪೂರ್ಣವಾಗಿ ತಿರುಗಿದ ದಾಸರು ಹೇಳುವುದನ್ನು ಯಾರುತಾನೆ ಮರೆಯಲಾಗುತ್ತದೆ. – ಸಂ.]



# ಪುರಾಣಗಳಲ್ಲಿ ಮಿನುಗಿದ ಕನ್ನಡನಾಡು

---ಹೊನ್ನಾವರ ಆರ್. ಜಿ. ಶ್ಯಾನಭಾಗ.

ಕನ್ನಡನಾಡು ಪುರಾಣ ಪುರುಷರ ಪಾದಾರವಿಂದ ಸ್ಪರ್ಶದಿಂದ ಪಾವನಧಾಮವಾಗಿದೆ. ಹಲವಾರು ಪೌರಾಣಿಕ ಘಟನೆಗಳು ಇಲ್ಲಿ ನಡೆದಿರುವುದನ್ನು ಸಂಶೋಧಕರಷ್ಟೇ ಗುರುತಿಸಬಲ್ಲರು. ಘಟನೆಗಳು ನಡೆದಿರುವ ಪೌರಾಣಿಕ ಸ್ಥಳಗಳ ಹೆಸರು ಅಂದು ಒಂದಿದ್ದರೆ ಇಂದು ಅವು ಬದಲಾಗಿ ಹೊಸದಾಗಿ ನಾಮಕರಣಗೊಂಡಿವೆ. ಕರ್ನಾಟಕದ ಪ್ರಾಚೀನತೆ ಪುರಾಣದಷ್ಟೇ ಹಳೆಯದೆನ್ನಲು ಸ್ಥಳಪುರಾಣ ಜೀವಂತಸಾಕ್ಷಿ.

## ರಾಮಾಯಣಕ್ಕೆ ಶ್ರೀರಕ್ಷೆ ನೀಡಿದ ನಾಡು :

ಕರ್ನಾಟಕವನ್ನು ಆದಿಯಲ್ಲಿ ಮೈಸೂರು ಎಂದು ಕರೆಯುತ್ತಿದ್ದರೆ ಮಹಿಷಾಸುರ ಎಂಬ ರಾಕ್ಷಸ ಇಲ್ಲಿನ ಆಳರಸನಾದುದರಿಂದ ಅವನ ಹೆಸರು ಕನ್ನಡನಾಡಿಗೆ ಅಂಟಿತು. ಶ್ರೀರಾಮನು ಸೀತಾದೇವಿಯನ್ನು ಅರಸಲು ಮಹಿಷಿಗೆ ಹೋಗೆಂದು ಸುಗ್ರೀವನನ್ನು ಆಜ್ಞಾಪಿಸಿರುವ ಉಲ್ಲೇಖ ವಾಲ್ಮೀಕಿ ರಾಮಾಯಣದಲ್ಲಿ ಬಂದಿದೆ.

ಈಗಿನ ಬಳ್ಳಾರಿ, ಬೆಳಗಾಂವ, ಧಾರವಾಡ, ಚಿತ್ರದುರ್ಗ, ಉತ್ತರಕನ್ನಡ ಹಾಗೂ ಶಿವಮೊಗೆ ಜಿಲ್ಲೆಯ ಕೆಲಭಾಗ ಸೇರಿ ಕುಂತಳದೇಶವಾಗಿತ್ತು. ಶಿವಮೊಗ್ಗೆಯ ಕುಪ್ಪಟ್ಟೂರ ಕುಂತಳ ನಗರವಾಗಿತ್ತು. ಚಂದ್ರಹಾಸನು ಇದನ್ನು ರಾಜಧಾನಿ ಮಾಡಿಕೊಂಡಿದ್ದನು.

ಕೊಡಗಿಗೆ ಬ್ರಹ್ಮದೇಶವೆಂದೂ ಕ್ರೋಢದೇಶವೆಂದೂ ಕರೆಯುತ್ತಿದ್ದರು. ಹಾನಗಲ್ಲಿಗೆ ಮತ್ಸ್ಯರಾಜ ಹಾಗೂ ಅನೆಗೊಂದಿಗೆ ಕಿಷ್ಕಿಂಧೆ ಎಂದು ಸ್ಥಳನಾಮಗಳಿದ್ದವು.

'ಆನಂದ ರಾಮಾಯಣ', 'ಪದ್ಮಪುರಾಣ', 'ಮಾರ್ಕಂಡೇಯ ಪುರಾಣ' 'ವಿಷ್ಣು ಧರ್ಮೋತ್ತರ ಪುರಾಣ', 'ಮಹಾಭಾರತಗಳಲ್ಲಿ' ಕರ್ನಾಟಕ ಎಂಬ ಪದ ಪ್ರಯೋಗಗೊಂಡಿದೆ. ಸೋಮದೇವನ ಕಥಾ ಸರಿತ್ಸಾಗರ ವರಾಹಮಿಹಿರನ 'ಬೃಹತ್‌ಸಂಹಿತೆ' ರಾಜಶೇಖರನ 'ಕಾವ್ಯಮೀಮಾಂಸೆ'ಗಳಲ್ಲಿ ಕರ್ನಾಟಕದ ಉಲ್ಲೇಖ ಇದೆ. ಶ್ರೀರಾಮನ ಅಶ್ವಮೇಧ ಕುದುರೆ ಕರ್ನಾಟಕದ ಕಡೆಗೆ ಬಂದಿತೆಂದು ರಾಮಾಯಣ ಹೇಳುತ್ತದೆ. ರಾಮಾಯಣಕ್ಕೂ ಕರ್ನಾಟಕಕ್ಕೂ ನಿಕಟ ಸಂಬಂಧ. ಪಿತೃವಾಕ್ಯಪಾಲನೆಗಾಗಿ ಶ್ರೀರಾಮನು ಕನ್ನಡನಾಡಲ್ಲಿದ್ದ ಅಗಸ್ತ್ಯರ ಆಶ್ರಮಕ್ಕೆ ಬಂದಿದ್ದನು. ಸೀತೆಯನ್ನು ಕದ್ದೊಯ್ಯುವಾಗ ತಡೆಗಟ್ಟಿದ ಜಟಾಯುವನ್ನು ರಾವಣಾಸುರನು ಜಟಿಂಗ ರಾಮೇಶ್ವರ ಎಂಬ ಬಳಿ ರೆಕ್ಕೆ ಕಡಿದು ನೆಲಕ್ಕುರುಳಿಸಿದ. ಇದು ಚಿತ್ರದುರ್ಗ ಜಿಲ್ಲೆಯಲ್ಲಿದೆ.

ಜಟಾಯುವಿಗೆ ಅಂತ್ಯಸಂಸ್ಕಾರ ಮಾಡಿ ರಾಮ ಲಕ್ಷ್ಮಣರು ಕಿಷ್ಕಿಂಧೆಗೆ ಬಂದರು. ಇಲ್ಲಿಂದ ರಾಮಾಯಣದ ಕಿಷ್ಕಿಂಧಾ ಕಾಂಡ ಆರಂಭ. ಅಲ್ಲಿಂದ ಸಹೋದರರು ಪಂಪಾಕ್ಷೇತ್ರಕ್ಕೆ ಬಂದರು. ಅದು ಇಂದಿನ ಸುಪ್ರಸಿದ್ಧ ಇತಿಹಾಸಿಕ ತಾಣ ಹಂಪೆಯೇ ಆಗಿದೆ. ಪಂಪಾಕ್ಷೇತ್ರದಲ್ಲಿ ಮತಂಗ ಮುನಿಗಳು ಹಾಗೂ ಶ್ರೀರಾಮಭಕ್ತೆ ಶಬರಿಯರ ಆಶ್ರಮಗಳಿದ್ದವು. ಭಕ್ತಾಗ್ರಣಿ ಶಬರಿ ಕರ್ನಾಟಕದವಳು. ಪಂಪಾ ಸರೋವರದಲ್ಲಿ ಶ್ರೀರಾಮ ಪುಣ್ಯಸ್ನಾನ ಮಾಡಿದ್ದನು. ತುಂಗೆಯ ದಡದ ಮೇಲಿದ್ದ ಮೂಕಪರ್ವತದ ಮೇಲೆ ಶ್ರೀರಾಮ ಸುಗ್ರೀವನನ್ನು ಮೊದಲು ಕಂಡದ್ದು. ಸುಗ್ರೀವ ಕಿಷ್ಕಿಂಧೆಯ ಆಳರಸ ಆಗಿದ್ದನು. ಬಳ್ಳಾರಿ ಜಿಲ್ಲೆಯ ಇಂದಿನ ಆನೆಗೊಂದಿ ಹಿಂದಿನ ಕಿಷ್ಕಿಂಧೆ. ಶ್ರೀರಾಮನ ಧೂತ ಹನುಮಂತ ಕರ್ನಾಟಕದವನು. ಶ್ರೀರಾಮನು ಕಷ್ಟಕಾಲದಲ್ಲಿ ಸಂಪೂರ್ಣ ನೆರವು ಪಡೆದುದು ಕರ್ನಾಟಕದ ನೆಲದ ಮೇಲೆಯೇ ಆಗಿರುವುದು.

## ನಾಡಿಗೆ ಹಿರಿತನ ತಂದ ಮಹಾಭಾರತ :

ಮಹಾಭಾರತದ ಪೌರಾಣಿಕ ಘಟನೆಗಳೂ ಕನ್ನಡ ನಾಡಲ್ಲಿ ನಡೆದಿವೆ. ರಾಜಸೂಯ ಯಜ್ಞ ಮಾಡಲು ಸಹದೇವ ಕಪ್ಪಕಾಣಿಕೆ ವಸೂಲಿಮಾಡಲು ಕಿಷ್ಕಿಂಧೆಗೆ ಬಂದಿದ್ದ. ಯಾಗದಲ್ಲಿ ವೈಜಯಂತಿ ದೊರೆ ಪಾಲ್ಗೊಂಡಿದ್ದರು. ಈಗಿನ ಬನವಾಸಿ ದೊರೆಯ ರಾಜಧಾನಿ ಆಗಿತ್ತು. ಒಂದು ವರ್ಷಕಾಲ ಪಾಂಡವರು ಅಜ್ಞಾತವಾಸ ಮತ್ಸ್ಯನಗರಿಯಲ್ಲಿ ಕಳೆದರು ಅದು ಇಂದಿನ ಹಾನಗಲ್ಲು. ತೀರ್ಥಯಾತ್ರೆಯ ಕಾಲದಲ್ಲಿ ಅರ್ಜುನ ಕರ್ನಾಟಕಕ್ಕೆ ಬಂದಿದ್ದ ಗೋಕರ್ಣ ಕ್ಷೇತ್ರಕ್ಕೆ ಬಂದು ಮಹಾ ಬಲೇಶ್ವರನನ್ನು ಆರಾಧಿಸಿ ಪಾಪಪರಿಹಾರ ಮಾಡಿಕೊಂಡ ಪ್ರಸ್ತಾಪ ಮಹಾಭಾರತದ ಆದಿಪರ್ವದಲ್ಲಿ ಬರುವುದು.

ಪೌಲಸ್ತ್ಯಮುನಿಗಳು ಭೀಷ್ಮನಿಗೆ ಮತಂಗಾಶ್ರಮವನ್ನು ಪರಿಚಯಿಸಿದರು. ಕನ್ನಡ ನಾಡಲ್ಲೇ ಇದ್ದ ಈ ಆಶ್ರಮದಲ್ಲಿ ಶಬರಿ ಶ್ರೀರಾಮನನ್ನು ಆದರಿಸಿದಳು.

ಪರುಶುರಾಮ ತನ್ನ ತಂದೆಯ ಕಾಮಧೇನು ಅಪಹರಿಸಿದ ಕಾರ್ತವೀರ್ಯಾರ್ಜುನನ್ನು ಸಂಹರಿಸಿದ್ದು ಕೋಲಾರದಲ್ಲಿ. ಪ್ರತೀಕಾರವಾಗಿ ಅವನ ಮಕ್ಕಳು ಶತಶೃಂಗದ ಮೇಲೆ ತಪೋನಿರತರಾಗಿದ್ದ ಜಮದಗ್ನಿಯನ್ನು ಸಂಹರಿಸಿದರು, ಶತಶೃಂಗ ಕೋಲಾರದಲ್ಲಿದೆ. ದಕ್ಷಿಣ ಕನ್ನಡದ ಸುಬ್ರಹ್ಮಣ್ಯ ಶ್ರೀಕ್ಷೇತ್ರ ಪರುಶುರಾಮ ಸೃಷ್ಟಿಯ ಭಾಗ. ಕುಮಾರಸ್ವಾಮಿ ಇಲ್ಲಿನ ಕುಮಚ ಪರ್ವತದ ಮೇಲೆ ತಪಗೈ

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ--

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇವಸ್ಥಾನಗಳು,**

ತಿರುಪತಿ.

ದುದರಿಂದ ಅದು ಶ್ರೀಕ್ಷೇತ್ರ ಸುಬ್ರಹ್ಮಣ್ಯವಾಯಿತು. ಪ್ರಹ್ಲಾದನು ತೀರ್ಥಾಟನೆಗೆಂದು ಇಲ್ಲಿಗೆ ಬಂದಿದ್ದ. ಇದೇ ಉದ್ದೇಶಕ್ಕಾಗಿ ಅರ್ಜುನನೂ ಬಂದಿದ್ದನು.

ಸಮುದ್ರರಾಜ ಕಬಳಿಸಿರುವ ಗೋಕರ್ಣಕ್ಷೇತ್ರವನ್ನು ಪರುಶುರಾಮನು ತಪೋಬಲದಿಂದ ವಿಮೋಚಿಸಿದನು. ವರಾಹ ಪುರಾಣದಲ್ಲಿ ಇದರ ವೃತ್ತಾಂತ ಇದೆ. ಜಿಂಕೆಯ ರೂಪದಲ್ಲಿದ್ದ ಪರಮೇಶ್ವರನ ಕೊಂಬನ್ನು ಮುರಿದು ಬ್ರಹ್ಮನು ಉತ್ತರಗೋಕರ್ಣದಲ್ಲಿ ಸ್ಥಾಪಿಸಿದ. ಮೂಲೋಕ ಜಯಿಸುವ ವರ ರಾವಣಾಸುರ ಪಡೆದದ್ದು ಗೋಕರ್ಣದಲ್ಲಾಗಿರುವುದು. ರಾವಣನ ಕೈಗೆ ಬಂದ ಲಿಂಗ ಅವನ ಕೈಗೆ ದಕ್ಕದಂತೆ ಗೋಕರ್ಣದಲ್ಲಿ ಅದು ಪ್ರತಿಷ್ಠಾಪನೆಗೊಳ್ಳಲು ವಟುರೂಪಿ ಗಣಪ ಕೈವಾಡವನ್ನು ಹೂಡಿದ; 'ನಾರದೀಯ ಪುರಾಣ' 'ಶಿವಪುರಾಣಗಳಲ್ಲಿ' ಗೋಕರ್ಣದ ಹಿರಿಮೆ ಮೊಳಗಿದೆ.

## ಕಾವೇರಿಯ ಮಡಿಲಲ್ಲಿ ಪುರಾಣ :

ನಾಡಿನ ಜೀವನಾಡಿ ಕಾವೇರಿನದಿ ಪುರಾಣಪ್ರಸಿದ್ಧಿ ಗಿಟ್ಟಿಸಿಕೊಂಡಿದೆ. ಅಗಸ್ತ್ಯಮುನಿ ತಪೋ ನಿರತರಾದಾಗ ಗಣಪತಿ ಕಾಗೆ ರೂಪಧರಿಸಿ ಬಂದು ಅವನ ಕಮಂಡಲ ಮುಗುಚಿಹಾಕಿ ಕಾವೇರಿ ನದಿಯಾಗಿ ಹರಿಯುವಂತೆ ಮಾಡಿದ. ಇದು ಅಪ್ಸರೆಯರು ವಿಹರಿಸುವ ತಾಣವಾಗಿತ್ತು. ಈ ನದಿಯಲ್ಲಿ ಸ್ನಾನ ಮಾಡಿದವನಿಗೆ ಸಹಸ್ರ ಗೋವು ದಾನಮಾಡಿದ ಪುಣ್ಯಲಭಿಸುವುದೆಂದು ಮಹಾಭಾರತದ ವನಪರ್ವ ಹೇಳುವುದು. ವಿಷ್ಣುಲೋಕ, ಶಿವಲೋಕ, ಬ್ರಹ್ಮಲೋಕ ನದೀತೀರದಲ್ಲಿ ನೆಲೆಸಿವೆ ಎಂದು ಹೇಳಿವೆ. ರಾಮನಾಥಪುರ, ಶ್ರೀರಂಗಪಟ್ಟಣ, ಕರಿಘಟ್ಟ, ತಿರುಮಕೂಡಲು, ತಲಕಾಡು ಎಂಬ ಪುಣ್ಯದಾಮಗಳು ಕಾವೇರಿ ತೀರದಗುಂಟ ನೆಲೆಸಿರುವ ಪುಣ್ಯದಾಮಗಳಾಗಿವೆ.

ರಂಗನಾಥನ ಸಾನಿಧ್ಯದಿಂದಾಗಿ ಕಾವೇರಿ ಗಂಗೆಯಷ್ಟೇ ಪುನೀತಳು. ಅವಳು ಸಪ್ತಗಂಗೆಯಲ್ಲೊಬ್ಬಳು. ಎಂದೇ ಕಳಶ ಪೂಜಾಕಾಲದಲ್ಲಿ ಕಳಶದ ನೀರಿಗೆ ಕಾವೇರಿಯನ್ನು ಆವಾಹಿಸುತ್ತಾನೆ. ಬ್ರಹ್ಮಪುರಾಣ ಇದನ್ನು ಉಲ್ಲೇಖಿಸಿದೆ. ಶ್ರೀರಂಗಪಟ್ಟಣ ಗೌತಮಾಶ್ರಮ ಎಂದು ಪ್ರಸಿದ್ಧಿಯಾಗಿತ್ತು. ಇಲ್ಲಿ ಬರ ಬಿದ್ದಾಗ ಗೌತಮ ಮುನಿಗಳು ತಪೋಬಲದಿಂದ ಕ್ಷಾಮ ನಿವಾರಿಸಿದರು. ನರಸೀಪುರಕ್ಕೆ ತಿರುಮಕೂಡಲ ಕ್ಷೇತ್ರ ಎನ್ನುವರು. ಅಗಸ್ತ್ಯಮುನಿಗಳು ಇಲ್ಲೊಂದು ಲಿಂಗ ಸ್ಥಾಪಿಸಿದರು. ತಲಕಾಡಿನಲ್ಲಿ ಜಂಬೂಕ್ಷೇತ್ರ ಇದೆ. ಶಿಲ್ಪಶಾಸ್ತ್ರ ಪ್ರಾವಿಣ್ಯತೆ ಗಿಟ್ಟಿಸಿಕೊಳ್ಳಲು ವಿಶ್ವಕರ್ಮ ಇಲ್ಲಿ ಲಿಂಗ ಸ್ಥಾಪಿಸಿದ್ದನು. ಇಂದ್ರನು ತನ್ನ ವಜ್ರಾಯುಧದಿಂದ ಕಾವೇರಿಗೆ ಅಡ್ಡಗೋಡೆಯಾಗಿ ನಿಂತ ಪರ್ವತವನ್ನು ದೇಧಿಸಿ ಪ್ರವಾಹವಾಗಿ ಹರಿಯಲು ಬಿಟ್ಟ ಸ್ಥಳ ಇದೆ. ಇದು ಶಿಲಾವೇಧಿ ಕ್ಷೇತ್ರವಾಗಿದೆ, ಇಲ್ಲಿರುವ ನೀಲಾದ್ರಿ ಸ್ಥಳದಿಂದ ಸುಗ್ರೀವ ಸೇತುವೆ ಕಟ್ಟಲು ಬಂಡೆಗಲ್ಲನ್ನು ಒಯ್ದಿದ್ದನು.

## ಕಪಿಲೆ ತುಂಗೆಯರ ಪುರಾಣಲೀಲೆ :

ಗಂಗೆಯ ಸ್ನಾನ, ತುಂಗೆಯ ಪಾನ ಪವಿತ್ರತೀರ್ಥ ಎಂದು ಪುರಾಣ ಹೇಳಿದೆ. ತುಂಗೆಯ ತಟದ ಮೇಲೆ ಶೃಂಗೇರಿಕ್ಷೇತ್ರ ಇದೆ. ಶೃಂಗ ಮುನಿಗಳ ಹೆಸರು ಇದಕ್ಕೆ ಬಂದಿದೆ. ಹಿಂದೊಮ್ಮೆ ಇಲ್ಲಿ ಅನಾವೃಷ್ಠಿಯಾದಾಗ ತಪೋಬಲದಿಂದ ಮುನಿಗಳು ಮಳೆಸುರಿಸಿದರು. ಋಷ್ಯಶೃಂಗನ ತಪೋಭೂಮಿ ಇದಾಗಿದೆ. ತುಂಗೆಯ ತಟದ ಮೇಲೆ ಪಂಪಾಕ್ಷೇತ್ರ ಇದೆ. ಹರಿ, ಹರ ಗುಹಾರಣ್ಯದಿಂದ ಹೆಸರು ಹೊಂದಿತ್ತು. ಅಮರನಾಗುವ ವರ ಪಡೆದ ಗುಹಾಸುರನನ್ನು ಹರಿ--ಹರ ಇಬ್ಬರೂ ಒಂದೇ ದೇಹದಲ್ಲಿ ಸೇರ್ಪಡೆಯಾಗಿ ಸಂಹರಿಸಿದರಿಂದ ಅಸುರನಾದ ಗುಹನ ಅಪೇಕ್ಷೆಯಂತೆ ಸ್ಥಳಕ್ಕೆ ಹರಿಹರ ಎಂಬ ಹೆಸರು ಬಂದಿದೆ.

ಕಪಿಲಾ ನದಿ ಪವಿತ್ರನದಿ. ಕಪಿಲ ಮುನಿಯ ತಪಸ್ಸಿನ ಫಲದಾಗಿ ತುಳಸಿಗಿಡದ ಮೂಲದಿಂದ ಹುಟ್ಟಿದ ನದಿ. ಇದು ಸಗರನ ಮಕ್ಕಳಿಗೆ ಮೋಕ್ಷ ಕಾಣಿಸಿದೆ. ನದಿ ತಟದ ಮೇಲೆ ಶ್ರೀಕಂಠೇಶ್ವರ ಕ್ಷೇತ್ರ ಇದೆ. ಅದಕ್ಕೀಗ ನಂಜನಗೂಡೆನ್ನುವರು. ದೇವತೆಗಳು ಹಾಗೂ ರಾಕ್ಷಸರು ಅಮೃತಕ್ಕಾಗಿ ಕ್ಷೀರಸಾಗರ ಕಡೆಯುವಾಗ, ಕಾಲಕೂಟ ಎಂಬ ವಿಷ ಉದ್ಭವಿಸಿದನ್ನು ಶಿವನು ಇಲ್ಲಿ ಕುಡಿದುದರಿಂದ ಈ ಹೆಸರು ಬಂದಿದೆ. ಶಿವರಹಸ್ಯ ಪುರಾಣದಲ್ಲಿ ಈ ಮಹಾತ್ಮೆ ಬಂದಿದೆ. ವಸಿಷ್ಠನು ಮಕ್ಕಳಿಗೆ ಮೋಕ್ಷಕಾಣಿಸಲು ಕಾವೇರಿಯಲ್ಲಿ ಮಿಂದನು. ಶೇಷಾದ್ರಿಯಲ್ಲಿ ವೆಂಕಟೇಶ್ವರ ವಿಗ್ರಹ ಸ್ಥಾಪಿಸಿದನು. ಈ ತಾಣ ಈಗ ಬಿಳಿಗಿರಿರಂಗನ ದಟ್ಟವಾಗಿದೆ. ಇದಕ್ಕೆ ಚಂಪಾರಣ್ಯ ಎಂಬ ಇನ್ನೊಂದು ಹೆಸರಿದೆ. ಈಶ್ವರನ ಗಣ ನಂದಿ ಭೂಲೋಕದಲ್ಲಿಳಿದು ಕಾಮಧೇನುವಿನೊಂದಿಗೆ ಸಮಾಗಮವಾಗಿ ಸಹಸ್ರಾರು ಕರುವಿಗೆ ಜನ್ಮ ನೀಡಿತು. ಅವುಗಳಿಗೆ ಹಾಲುಣಿಸಲು ಕಾಮಧೇನು ತನ್ನ ಕೆಚ್ಚಲಿನಿಂದ ಹಾಲು ಹೊಳೆಯಾಗಿ ಸುರಿಸಿರುವುದನ್ನು ಬರಪೀಡಿತ ಜನರು ಕುಡಿದರು. ನಂದಿ ತಪಮಾಡಿದ ಸ್ಥಳಕ್ಕೆ ನಂದಿದೆಟ್ಟ ಎನ್ನುವರು. ಬ್ರಹ್ಮ ಪುರಾಣದಲ್ಲಿ ನಂದಿ ಮಹಾತ್ಮೆ ಪ್ರಸ್ತಾವ ಬರುವುದು.

ಸಂಶೋಧಕರು ಬೀರಿದ ಬೆಳಕಲ್ಲಿ ಪುರಾಣ ಅವಲೋಕಿಸಿದಾಗ ಪುರಾಣಪ್ರಸಿದ್ಧ ಘಟನೆಗಳಲ್ಲಿ ಬಹುತೇಕ ಕನ್ನಡ ನಾಡಲ್ಲೇ ನಡೆದವು ಎಂದು ರುಜುವಾಗುತ್ತದೆ. ●

# ವಾರ್ತಾಲಹರಿ

## ಶಂಕುಸ್ಥಾಪನೆ

ತಿರುಪತಿಯ ಡೈರಾಗಿ ಪಟ್ಟಿಡ ಪ್ರಾಂತದಲ್ಲಿ ಐದು ಲಕ್ಷರೂಗಳ ಅಂದಾಜು ವೆಚ್ಚದಲ್ಲಿ ತಿ.ತಿ.ದೇ. ನಿರ್ಮಿಸಲಿರುವ ವೈದ್ಯಶಾಲೆಗೆ ತಿ.ತಿ.ದೇ. ಅಧ್ಯಕ್ಷರು ಶ್ರೀ ಎ. ಚೆಂಗಲ್‌ರೆಡ್ಡಿ ಅವರು 93 ರ ಆಗಸ್ಟ್ ಕೊನೆಯಲ್ಲಿ ಶಂಕುಸ್ಥಾಪನೆ ಮಾಡಿದರು. ತತ್ಸಂದರ್ಭದಲ್ಲಿ ಏರ್ಪಾಡಾಗಿದ್ದ ಸಮಾರಂಭದಲ್ಲಿ ಅಧ್ಯಕ್ಷಪೀಠದಿಂದ ಮಾತನಾಡುತ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ ಅವರು ಈ ವೈದ್ಯಶಾಲಾ ಭವನ 94ರ ಜನವರಿ 26 ರ ಒಳಗೆ ಪೂರ್ತಿಯಾಗಬೇಕೆಂದು ಎಂಜನಿಯರಿಂಗ್ ಅಧಿಕಾರಿಗಳನ್ನು ಕೋರಿದರು. ತಿ.ತಿ.ದೇ. ಮುಖ್ಯ ಎಂಜನಿಯರ್ ಶ್ರೀ ಕೆ. ಎಸ್. ಎಲ್. ಮೂರ್ತಿ ಅವರು ತಮ್ಮಮತ್ತಿತರ ಸಹೋದ್ಯೋಗಿಗಳೊಡನೆ ಸಂಪ್ರದಿಸಿ ಭವನ ನಿರ್ಮಾಣವನ್ನು ಗಡುವಿನೊಳಗೆ ಪೂರೈಸುವುದಾಗಿ ಭರವಸೆ ನೀಡಿದರು.

## ಗೋಕುಲಾಷ್ಟಮಿ

ತಿರುಮಲೆ ತಿರುಪತಿ ದೇವಸ್ಥಾನಗಳ ತಿರುಪತಿಯ ಡೈರಿ ಫಾರಂನಲ್ಲಿ ಈ ವರ್ಷದ ಗೋಕುಲಾಷ್ಟಮಿ ಉತ್ಸವ ವೈಭವದಿಂದ ನಡೆಯಿತು. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ, ಸಹಕಾರ್ಯ ನಿರ್ವಹಣಾಧಿಕಾರಿ ಶ್ರೀ ಬಿ. ವೆಂಕಟ್ರಾಮಯ್ಯ, ಪೌರಸಂಬಂಧಾಧಿಕಾರಿ ಡಾ || ಆರ್. ಸೂರ್ಯನಾರಾಯಣಮೂರ್ತಿ ಹಾಗೂ ಇತರರು ಈ ಉತ್ಸವದಲ್ಲಿ ಪಾಲುಗೊಂಡು ಗೋಪೂಜೆಯನ್ನು ಯಶಸ್ವಿಗೊಳಿಸಿದರು.

ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರಿಂದ ಗೋಕುಲಾಷ್ಟಮಿ ಸಂಗೀತೋತ್ಸವ ನಡೆಯಿತು.

## ಅಂತರ ರಾಷ್ಟ್ರೀಯ ಸ್ಥಾಯಿಗೆ ಬರ್ಡ್

ತಿರುಪತಿಯಲ್ಲಿನ ತಿ.ತಿ.ದೇ. ನಿರ್ವಹಣೆಯಲ್ಲಿನ ಬರ್ಡ್ (ಬಾಲಾಜಿ ವಿಕಲಾಂಗ ಸಂಕ್ಷೇಮ ಕೇಂದ್ರ) ಸಂಸ್ಥೆಯನ್ನು ಅಂತರ ರಾಷ್ಟ್ರೀಯ ಸ್ಥಾಯಿಯಲ್ಲಿ ಅಭಿವೃದ್ಧಿ ಗೊಳಿಸುವಲ್ಲಿ ಪ್ರಯತ್ನಿಸಲಾಗುವುದೆಂದು ತಿ.ತಿ.ದೇ. ಅಧ್ಯಕ್ಷರು ಶ್ರೀ ಎ. ಚೆಂಗಲ್‌ರೆಡ್ಡಿ ಅವರು ತಿಳಿಸಿದ್ದಾರೆ. ಈಚೆಗೆ ಸಂಸ್ಥೆಯವರು ಕೊಂಡುಕೊಂಡ ಹಲವು ಲಕ್ಷ ರೂಪಾಯಿಗಳ ವೈಶಿಷ್ಟ್ಯಪೂರ್ಣ ಯಂತ್ರೋಪಕರಣಗಳನ್ನು ಅವರು ಉದ್ಘಾಟಿಸುತ್ತ ಮಾತನಾಡುತ್ತಿದ್ದರು. ಬರ್ಡ್ ಸಂಸ್ಥೆಯ ಸೇವೆಯಬಗ್ಗೆ ಸರಿಯಾದ ಪ್ರಚಾರ ದೊರೆತು ಅದರ ಸೇವಾ ಪರಿಧಿ ವಿಸ್ತಾರವಾಗಬೇಕೆಂದೂ, ತಕ್ಕ ವಿರಾಳ ವಂತಿಗೆಗಳು ಕೂಡಿ ಬರಬೇಕೆಂದೂ, ಹಾರೈಸಿದರು.

ಬರ್ಡ್‌ನ ಉಪ ನಿರ್ದೇಶಕ ಡಾ|| ಟಿ. ಶ್ರೀಧರ್ ಅವರು ಮಾತನಾಡುತ್ತ ತಮ್ಮ ಸಂಸ್ಥೆಯವರು ಸ್ಥಾಪಿಸಿದ ಕಿಯಕ್ಸಾಂ ಯಂತ್ರ ಇಡೀ ದೇಶದಲ್ಲಿಯೇ ಪ್ರಥಮ ಯಂತ್ರವಾಗಿದೆ ಎಂದು ನುಡಿದರು.

ಕಾರ್ಯಕ್ರಮದಲ್ಲಿ ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಸದಸ್ಯರು ಶ್ರೀಮತಿ ರಾಜೇಶ್ವರಿ, ಶ್ರೀ ಶೇಷಗಿರಿರಾವ್, ಶ್ರೀ ಶ್ರೀರಾಮಮೂರ್ತಿ, ಶ್ರೀ ಪ್ರತಾಪ ಅಗರವಾಲ್, ತಿ.ತಿ.ದೇ. ಪೌರಸಂಬಂಧಾಧಿಕಾರಿ ಡಾ|| ಆರ್. ಸೂರ್ಯನಾರಾಯಣ ಮೂರ್ತಿ ಮತ್ತಿತರರು ಪಾಲುಗೊಂಡಿದ್ದರು.

## ಸುಪ್ರಭಾತ ಸ್ಪರ್ಧೆಗಳು

ತಿ. ತಿ. ದೇವಸ್ಥಾನಗಳು ಆಗಸ್ಟ್ ತಿಂಗಳಲ್ಲಿ ತಿರುಪತಿಯಲ್ಲಿ ಶ್ರೀ ವೆಂಕಟೇಶ್ವರ ಸುಪ್ರಭಾತ ಸ್ಪರ್ಧೆಗಳನ್ನು ಏರ್ಪಡಿಸಿದ್ದು, ವಿಜೇತರಿಗೆ ತಿ.ತಿ.ದೇ. ಅಧ್ಯಕ್ಷರು ಶ್ರೀ ಎ. ಚೆಂಗಲ್ ರೆಡ್ಡಿ ಅವರು ಬಹುಮಾನಗಳನ್ನು ವಿತರಿಸಿದರು. ದೈವ ಚಿಂತನೆಯಿಂದ ಜೀವನ ಸುಗಮವಾಗುವುದೆಂದು ಅವರು ಹಿತವನ್ನು ನುಡಿಯುತ್ತ ಸುಪ್ರಭಾತದ ನೆನಪಿನಿಂದಾಗಿ ದಿನವೆಲ್ಲ ಉತ್ಸಾಹ ಔದಾರ್ಯಗಳಿಂದ ತೊಡಗಿಸಿಕೊಳ್ಳಲು ಸಹಾಯವಾಗುವುದೆಂದು ನುಡಿದರು.

## ತಿರುಪತಿಯಲ್ಲಿ ವಸತಿ ಸೌಕರ್ಯ

ತಿರುಪತಿಗೆ ಆಗಮಿಸುವ ಯಾತ್ರಿಕರಿಗೆ ಸಾಕಾಗುವಷ್ಟು ವಸತಿ ಸೌಲಭ್ಯವನ್ನು ಕಲ್ಪಿಸಲು ಏರ್ಪಾಡುಗಲು ನಡೆದಿವೆ ಎಂದು ತಿ.ತಿ.ದೇ. ಅಧ್ಯಕ್ಷ ಶ್ರೀ ಎ. ಚೆಂಗಲ್‌ರೆಡ್ಡಿ ಅವರು ತಿಳಿಸಿದ್ದಾರೆ.

ಶ್ರೀಯುತರು ತಿರುಪತಿಯ ಶ್ರೀ ಎಸ್.ವಿ. ಅತಿಥಿಗೃಹದ ಹೊಸ ವಿಸ್ತರಣವನ್ನು ಉದ್ಘಾಟಿಸಿ ಮಾತನಾಡುತ್ತಿದ್ದರು. ಅಕ್ಟೋಬರ್ ಕೊನೆಯ ಹೊತ್ತಿಗೆ ಎಸ್.ಜಿ. ಎಸ್. ಕಾಲೇಜಿನ ವಿದ್ಯಾರ್ಥಿ ವಸತಿಗೃಹ ಅರವತ್ತು ಲಕ್ಷ ರೂಗಳ ಅಂದಾಜಿನಲ್ಲಿ ನಿರ್ಮಾಣವಾಗುವುದೆಂದೂ, ತಿರುಪತಿಯ ರೈಲ್ವೆ ಸೇತುವೆಯಿಂದ ನಂದಿ ವೃತ್ತದವರೆಗಿನ ಬಳಸು ರಸ್ತೆಯು ಎರಡು ತಿಂಗಳಿನಲ್ಲಿ ಪೂರ್ಣವಾಗುವುದೆಂದು ಅವರು ತಿಳಿಸಿದರು.

ಎಸ್. ವಿ. ಅತಿಥಿಗೃಹದ ಹೊಸ ವಿಸ್ತರಣವನ್ನು 26 ಲಕ್ಷ ರೂಗಳ ವೆಚ್ಚದಲ್ಲಿ ನಿರ್ಮಿಸಲಾಗಿದ್ದು 22 ಕೊಠಡಿಗಳಿವೆ. ಸಮಾರಂಭದಲ್ಲಿ ತಿ.ತಿ.ದೇ. ಮುಖ್ಯ ಎಂಜನಿಯರ್ ಶ್ರೀ ಕೆ. ಎಸ್. ಎಲ್. ಮೂರ್ತಿ, ವಿಶೇಷದರ್ಜೆಯ ಡೆ.ಇ.ಓ. ಶ್ರೀ ಆರ್. ವಾಸುದೇವನಾಯುಡು, ಪೌರಸಂಬಂಧಾಧಿಕಾರಿ ಡಾ|| ಆರ್. ಸೂರ್ಯನಾರಾಯಣ ಮೂರ್ತಿ ಮೊದಲಾದವರು ಭಾಗವಹಿಸಿದ್ದರು. ●



## ಶ್ರೀ ವೆಂಕಟೇಶ್ವರ ವ್ರತಮಾಲೆ

ವೈಕುಂಠಏಕಾದಶಿಯಂದು ತಿರುಪತಿಯಿಂದ ಕಾಲುಹಾದಿಯಲ್ಲಿ ನಡೆದು ತಿರುಮಲೆಯನ್ನು ಸೇರಿ ಸ್ವಾಮಿಯನ್ನು ದರ್ಶಿಸುವ ಶ್ರೀ ವೆಂಕಟೇಶ್ವರ ವ್ರತಮಾಲೆಯನ್ನು ತಿರುಪತಿಯ ಗೋವಿಂದಮಾಲಾ ಭಕ್ತ ಸಮಾಜ ಏರ್ಪಡಿಸಿದೆ. 60, 42, 30, 21, 7 ದಿನಗಳ ವ್ರತೋಪವಾಸಗಳಿಂದ ಕೂಡಿದ ಈ ವ್ರತದಲ್ಲಿ 23--12--93 ರಂದು ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದಲ್ಲಿ ಯಾಗಪೂಜೆ ಕಂಕಣಧಾರಣೆಯಿದ್ದು 24--12--93 ರಂದು ಬೆಟ್ಟವನ್ನೇರುವ ಕಾರ್ಯಕ್ರಮವಿದೆ. ಭಾಗವಹಿಸಲಿಚ್ಛಿಸುವ ಭಕ್ತರು ಕಾರ್ಯದರ್ಶಿ, ಗೋವಿಂದಮಾಲಾಭಕ್ತಸಮಾಜ, 2, ತಿ.ತಿ.ದೇ. ಮೊದಲಸತ್ರ, ತಿರುಪತಿ -- ಇವರಿಗೆ ಬರೆದು ವಿವರಗಳನ್ನು ತಿಳಿಯಬಹುದಾಗಿದೆ.

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

ಭೂಮಿಯ ಒಂದು ವಿಶಿಷ್ಟ ಗುಣ ಇಲ್ಲಿನ ಹಸಿರು. ಗಿಡವಾಗಿ, ಮರವಾಗಿ, ವನವಾಗಿ, ಕಾಡಾಗಿ ಮನುಷ್ಯನ ಜೊತೆಗೇ ಬೆಳೆದು, ಭೂಮಿಯ ಮೇಲಿನ ಮನುಷ್ಯನ ಇರವನ್ನು ಅರ್ಥಪೂರ್ಣ ಆಗಿಸಿರುವುದು ಹಸಿರು. ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿಯ ಸೇವೆಯಲ್ಲಿ ಪರಂಪರೆಯಿಂದ ನೀರುನೆರಳಿನ ತಾಣವಾಗಿ ಪ್ರಸಿದ್ಧಿ ಪಡೆದದ್ದು ಉಂಟು. ಅಂತಹ ಹಿರಿಮೆಯ ಪರಿಸರವನ್ನು ರಕ್ಷಿಸಲು 1981 ರಲ್ಲಿ 25 ಲಕ್ಷ ವೃಕ್ಷಗಳನ್ನು ಬೆಳೆಸುವ ವನಸಂರಕ್ಷಣೆಯ ಕಾರ್ಯಕ್ರಮವನ್ನು ಕೈಗೆತ್ತಿಕೊಳ್ಳಲಾಯಿತು. ಅದರ ಯಶಸ್ವಿ ಅನುಷ್ಠಾನದಿಂದ ಸ್ಫೂರ್ತವಾಗಿ ಹಲವಾರು ವನಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸರ್ವಜನಿಕರನ್ನೂ ಈ ಪರಿಸರ ಪರಿರಕ್ಷಣೆಯ ಪವಿತ್ರಕಾರ್ಯದಲ್ಲಿ ಪಾಲುಗೊಳ್ಳಲು ಯೋಜನೆಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ ಹಲವು ಈ ರೀತಿ ಇವೆ.

## ವೃಕ್ಷ ಸಂವರ್ಧನ ಯೋಜನೆ :

ಒಂದು ಎಕರೆ ಸ್ಥಳದಲ್ಲಿ ರೂ. 15,000 ರೂಪಾಯಿ ನೀಡಿದವರ ಹೆಸರಿನಲ್ಲಿ ಉಪವನವನ್ನು ಬೆಳೆಸಲಾಗುವುದು. ದಾನಿಗಳಿಗೆ ಹತ್ತು ವರ್ಷಗಳಕಾಲ ಪ್ರತಿವರ್ಷದಲ್ಲಿ ಎರಡು ದಿನ ತಿರುಮಲೆಯಲ್ಲಿ ಉಚಿತ ವಸತಿ ನೀಡಿ ಅವರಿಗೆ ಈ ಕಾಲದಲ್ಲಿ 5 ಮಂದಿಗೆ ಉಚಿತ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವೃಕ್ಷ ಪ್ರಸಾದ :

ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಸಸಿಗಳನ್ನು ಬೆಳೆಸುವ ಈ ಯೋಜನೆಯಲ್ಲಿ ದಾನಿಗಳ ಹೆಸರಿನಲ್ಲಿ ಪ್ರತಿವರ್ಷವೂ ನೂರು ಗಿಡಗಳನ್ನು ವಿತರಣೆ ಮಾಡಲಾಗುವುದು. ಹತ್ತು ಸಾವಿರ ರೂಪಾಯಿಗಳ ದಾನದಿಂದ ಈ ಯೋಜನೆಯಲ್ಲಿ ಪಾಲುಗೊಳ್ಳುವ ದಾನಿಗಳಿಗೆ ಪ್ರತಿವರ್ಷವೂ ಎರಡುದಿನ ತಿರುಮಲೆಯಲ್ಲಿ ಉಚಿತ ವಸತಿ 5 ಮಂದಿಗೆ ಉಚಿತ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ಸ್ಮಾರಕ ವನ :

ಒಂದೆಡೆ ಹತ್ತು ಮರಗಳನ್ನು 5 ವರ್ಷ ನೋಡಿಕೊಳ್ಳುವ ಈ ಯೋಜನೆಯಲ್ಲಿ 2000 ರೂ. ಗಳನ್ನು ನೀಡುವ ದಾನಿಗಳ ಹೆಸರನ್ನೆ ಈ ತರುಸಮೂಹಕ್ಕೆ ನೀಡಲಾಗುವುದು. ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವನಸಂರಕ್ಷಣ ಭಾಗಸ್ವಾಮ್ಯ :

ಏಳು ಬೆಟ್ಟಗಳ ವನಾಚ್ಛಾದನೆಯನ್ನು ಸಂರಕ್ಷಿಸುವ ಉದ್ದೇಶದ ಈ ಯೋಜನೆಯಲ್ಲಿ 1000 ರೂ.ಗಳ ದಾನದಿಂದ ಪಾಲುಗೊಳ್ಳಬಹುದು. ದಾನಿಗಳ ಹೆಸರನ್ನು ಮುಖ್ಯವಾಗಿ ಪ್ರದರ್ಶಿಸಲಾಗುವುದು. ಅವರ ಐದು ಮಂದಿಗೆ ಒಂದು ವರ್ಷ ವಿಶೇಷ ಪ್ರವೇಶದಲ್ಲಿ ದರ್ಶನಾವಕಾಶ ನೀಡಲಾಗುವುದು.

## ಅಧ್ಯಯನ ವನಗಳು :

ಸಸ್ಯವನದಲ್ಲಿ ಒಂದು ಬಗೆಯ ಸಸ್ಯದ ವಿಶೇಷ ಆರೈಕೆ ಮಾಡಲಾಗುವುದು. ಸಸ್ಯದ ಬಳಿ ದಾನಿಯ ಹೆಸರಿನ ಫಲಕವಿಡಲಾಗುವುದು. ಇದಕ್ಕೆ ದಾನ ನೀಡಬೇಕಾದ ಮೊತ್ತ ರೂ. 500/-

## ವೃಕ್ಷ ದತ್ತತೆ :

ತಿರುಮಲೆಯ ಹಾದಿಯಲ್ಲೂ ಬೀದಿಬದಿಗಳಲ್ಲೂ ವೃಕ್ಷಗಳನ್ನು ಬೆಳೆಸುವ ಈ ಯೋಜನೆಯಲ್ಲಿ 250 ರೂ. ನೀಡಿದವರ ಹೆಸರನ್ನು ಮರದ ಬಳಿ ಫಲಕದಲ್ಲಿ ಪ್ರದರ್ಶಿಸಲಾಗುವುದು.

ತಿರುಮಲೆಯ ಅರಣ್ಯವು ನಮ್ಮ ಪರಂಪರೆಯ ಕೊಡುಗೆಯಾಗಿದ್ದು ಅದನ್ನು ರಕ್ಷಿಸಿ ಮುಂದಿನ ಪೀಳಿಗೆಗೆ ತಲುಪಿಸುವ.

ದಶಕೂಪ ಸಮೋವಾಪಿ ದಶವಾಪಿ ಸಮೋ ಹ್ರದ
ದಶ ಹ್ರದ ಸಮಃ ಪುತ್ರ ದಶಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ ಹತ್ತು ಗಂಡುಮಕ್ಕಳು ಒಂದು ತರುವಿಗೂ ಸಮ.

ದಯವಿಟ್ಟು ಈ ಉದಾತ್ತ ಯೋಜನೆಗಳಲ್ಲಿ ಭಾಗಿಗಳಾಗಬೇಕೆಂದು ಭಕ್ತ ಬಂಧುಗಳಲ್ಲಿ ವಿನಂತಿಸಲಾಗಿದೆ.

ತಮ್ಮ ದಾನಗಳನ್ನು ಕಳುಹಿಸಬೇಕಾದ ವಿಳಾಸ:

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇವಸ್ಥಾನಗಳು,

ತಿರುಪತಿ -- 517 507.

# ಕರ್ನಾಟಕದಲ್ಲಿ..

## ಶ್ರೀ ಕಣ್ವಮಠದ ನೂತನ ಪೀಠಾಧಿಪತಿಗಳ ಪೀಠಾರೋಹಣ

ಶ್ರೀ ಕಣ್ವಮಠದ ನೂತನ ಪೀಠಾಧೀಶರಾಗಿ ಶ್ರೀ ಶ್ರೀ ವಿದ್ಯಾಭಾಸ್ಕರ ತೀರ್ಥರು ಬೆಂಗಳೂರಿನಲ್ಲಿ ಆಗಸ್ಟ್ 3 ಮತ್ತು 4 ರಂದು ನಡೆದ ಧಾರ್ಮಿಕ ಸಮಾರಂಭದಲ್ಲಿ ಪೀಠಾರೋಹಣ ಮಾಡಿದರು. ಇವರು ಶ್ರೀ ಕಣ್ವ ಮಠದ 12 ನೇ ಪರಿವ್ರಾಜಕವಾಗಿ ಹಾಗೂ ಶ್ರೀ ವಿದ್ಯಾಭೂಷಣ ತೀರ್ಥರ ಉತ್ತರಾಧಿ ಕಾರಿಯಾಗಿ ಯತ್ಯಾಶ್ರಮ ಸ್ವೀಕರಿಸಿದರು.

ಈ ಪೀಠಾರೋಹಣ ಕಾರ್ಯಕ್ರಮವನ್ನು ವಿಧಿವತ್ತಾಗಿ ನೆರವೇರಿಸಲು ಉಡುಪಿಯ ಶ್ರೀ ಪೇಜಾವರ ಮಠದ ಶ್ರೀ ವಿಶ್ವೇಶ್ವರ ತೀರ್ಥ ಶ್ರೀ ಪಾದಂಗಳವರ ವಿಶೇಷ ಪ್ರತಿನಿಧಿಯಾಗಿ ಶ್ರೀ ಸುಬ್ಬರಾಯರು ಆಗಮಿಸಿದ್ದರು. ಇವರು ಧಾರ್ಮಿಕ ಕ್ರಿಯೆಗಳಾದ ಜೀವಶ್ರಾದ್ಧಾ, ಶಾಕಲ್ಯಹೋಮ, ವಿರಜಾ ಹೋಮ ಮತ್ತು ಪೀಠಾರೋಹಣ ಕಾರ್ಯಕ್ರಮಗಳನ್ನು ನೆರವೇರಿಸಿದರು.

ಚೆನ್ನಪಟ್ಟಣದ ಸಮೀಪವಿರುವ ಕಣ್ವನದಿಯ ತೀರದಲ್ಲಿ ಬ್ರಹ್ಮಣ್ಯ ತೀರ್ಥರ ಬೃಂದಾವನದ ಎದುರು ನೂತನ ಶ್ರೀಗಳ ಪ್ರಾರಂಭಿಕ ವಿಧಿಗಳು ನಡೆದವು. ನಂತರ ಬಿ.ಇ.ಎಲ್. ಪ್ರವಚನ ಮಂದಿರದಲ್ಲಿ ಪೀಠಾರೋಹಣ ಸಮಾರಂಭವು ಸಕಲ ಮರ್ಯಾದೆಗಳೊಂದಿಗೆನಡೆಯಿತು. ಈ ಸಮಾರಂಭಕ್ಕೆ ಅಪಾರ ಸಂಖ್ಯೆಯಲ್ಲಿ ಜನರು ಆಗಮಿಸಿ ಶ್ರೀಗಳ ದರ್ಶನ ಮತ್ತು ಆಶೀರ್ವಾದ ಪಡೆದರು.

### ಕಿರುಪರಿಚಯ

ಕಣ್ವ ಮಠದ ಹನ್ನೆರಡನೆಯ ಗುರುವಾಗಿ ಅಧಿಕಾರ ಸ್ವೀಕರಿಸಿರುವ ಶ್ರೀ ಶ್ರೀ ವಿದ್ಯಾಭಾಸ್ಕರ ತೀರ್ಥ ಶ್ರೀಪಾದಂಗಳವರು 1925 ನೇ ಇಸವಿಯಲ್ಲಿ ರಾಯಚೂರು ಜಿಲ್ಲೆಯ ದೇವನದುರ್ಗದಲ್ಲಿ ಜನಿಸಿದರು. ಇವರ ಪೂರ್ವಾಶ್ರಮದ ಹೆಸರು ಶ್ರೀನಿವಾಸಪ್ಪಯ್ಯ ತಿಮ್ಮಪ್ಪಯ್ಯ ದೇವರು. ಇವರ ಪ್ರಾಥಮಿಕ ಅಭ್ಯಾಸವು ರಾಯಚೂರಿನಲ್ಲಿ ನಡೆದು ಹೈದರಾಬಾದಿನಲ್ಲಿ ಬಿ.ಎ. ಹಾಗೂ ಕಾನೂನು ಪದವಿಯನ್ನು ಪಡೆದರು. ತರುವಾಯ ನ್ಯಾಯವಾದಿಗಳಾಗಿ ಹೈದರಾಬಾದ್ ಮತ್ತು ಕರ್ನಾಟಕ ಉಚ್ಚ ನ್ಯಾಲಯದಲ್ಲಿ ಸೇವೆ ಸಲ್ಲಿಸಿದರು. ಶ್ರೀಗಳು ಸಂಸ್ಕೃತದಲ್ಲಿಯೂ ಬಿ.ಎ. ಪದವಿಯನ್ನು ಪಡೆದಿದ್ದಾರೆ.

ಇವರ ತಂದೆ ತಿಮ್ಮಪ್ಪಯ್ಯನವರು ವೈದಿಕ ಧರ್ಮಾಚರಣೆಯಲ್ಲಿ ಹೆಸರುಮಾಡಿದ್ದರು. ಇವರು ಗೃಹಸ್ಥರಾಗಿದ್ದು, ಮೂರುಗಂಡು ಮಕ್ಕಳು ಹಾಗೂ ಮೂರು ಹೆಣ್ಣುಮಕ್ಕಳ ಸಂತಾನವಿದೆ. ಇಬ್ಬರು ಗಂಡುಮಕ್ಕಳು ನ್ಯಾಯವಾದಿಗಳಾಗಿಯೂ, ಒಬ್ಬರು ವೈದ್ಯರಾಗಿಯೂ ಜನ ಸೇವೆಯಲ್ಲಿ ನಿರತರಾಗಿದ್ದಾರೆ.

ಇವರ ಮನೆತನದ ಹೆಸರು 'ದೇವರು' ಎಂದು ನಾಮಾಂಕಿತವಾಗಲು ಒಂದು ಕುತೂಹಲಕಾರಿ ಕಥೆಯಿದೆ.

ಇವರ ಮನೆತನದ ಮೂಲಪುರುಷರಾದ ಶ್ರೀ ತಿಮ್ಮಪ್ಪಯ್ಯನವರು ದೈವಾನುಗ್ರಹದಂತೆ ದಾಸಕೂಟವನ್ನು ಸೇರಿದರು. ದಾಸರಾದ ಮೇಲೆ ಇವರು ತಿರುಪತಿಯಲ್ಲಿ ತಿಮ್ಮಪ್ಪನ ಸೇವೆಯಲ್ಲಿ ನಿರತರಾದರು. ತಿರುಪತಿಯ ತಿಮ್ಮಪ್ಪ ಪ್ರೀತರಾಗಿ ಒಂದು ಭವ್ಯ ಮಂಟಪವನ್ನು ಇವರಿಗೆ ಅರ್ಚಕರ ಮೂಲಕ ಅನುಗ್ರಹಿಸಿದರು. ಆ ಮಂಟಪದಲ್ಲಿ ನಿತ್ಯವೂ ಸಂತರ್ಪಣೆ ಇತ್ಯಾದಿ ಕೈಂಕರ್ಯಗಳು ಪ್ರಾರಂಭವಾಗಿ ಇಂದಿಗೂ ಅದು ಮುಂದುವರೆಯುತ್ತಿದೆ. ಈಗ ಸ್ವತಃ ಶ್ರೀನಿವಾಸಪ್ಪಯ್ಯ ತಿಮ್ಮಪ್ಪಯ್ಯನವರು ಮತ್ತು ಅವರ ಸಹೋದರರು ತಿರುಮಲ ತಿರುಪತಿಯ ತಿಮ್ಮಪ್ಪನವರ ಮೂಲ ದೇವರನ್ನು ಪ್ರತಿವರ್ಷವೂ ಆರಾಧಿಸುತ್ತಿದ್ದಾರೆ. ಮೂಲ ಪುರುಷರಾದ ತಿಮ್ಮಪ್ಪಯ್ಯನವರಿಗೆ ಮೂಲದೇವರು (ತಿಮ್ಮಪ್ಪ) ಸ್ವಪ್ನದಲ್ಲಿ ದೇವದುರ್ಗಕ್ಕೆ ಹೋಗಲು ಆಜ್ಞಾಪಿಸಿದರು. ಅದೇ ಪ್ರಕಾರ ತಿಮ್ಮಪ್ಪಯ್ಯನವರಿಗೆ ವೈಶಾಖ ಶುದ್ಧ ಏಕಾದಶಿಯ ದಿನದಂದು ಶ್ರೀದೇವಿ, ಭೂದೇವಿಯ ಸಹಿತರಾಗಿ ಮೂರ್ತಿ ರೂಪವಾಗಿ ಸ್ವಾಮಿಯ ವಿಗ್ರಹ, ಒಂದು ಅರಳಿಮರದ ಬುಡದಲ್ಲಿ ದೊರೆಯಿತು. ಅಂದಿನಿಂದ ಇವರ ಮನೆತನದ ಹೆಸರು 'ದೇವರು' ಎಂದು ಕರೆಯಲ್ಪಡುತ್ತಿದೆ.

## ಕೋಲಾರದಲ್ಲಿ ಸಾರ್ವಜನಿಕ ಗಣೇಶೋತ್ಸವ

ಕೋಲಾರದ ಹಳೆಯ ಮಾಧ್ಯಮಿಕ ಶಾಲೆಯ ಆವರಣದಲ್ಲಿ 19--9--93 ರಿಂದ 26--9--93 ರ ವರೆಗೆ ಸಾರ್ವಜನಿಕ ಗಣೇಶೋತ್ಸವಗಳು ನಡೆದು ಯಶಸ್ವಿಯಾದವು.

19--9--93 ರಂದು ಬೆಳಗ್ಗೆ 9 ಅಡಿ ಎತ್ತರದ ಗಣಪತಿಯನ್ನು ಭವ್ಯವಾದ ಅಲಂಕೃತ ಮಂಟಪದಲ್ಲಿ ಬಿಜಯಗೈಸಿ ಪ್ರಾಣಪ್ರತಿಷ್ಠೆ ಪೂಜೆ ಮಂಗಳಾರತಿ ಮಾಡಿ ಗಣಪತಿಯ ಪ್ರಸಾದವಾದ ಫಲಗಳನ್ನು ಕೋಲಾರದ ಆಸ್ಪತ್ರೆಯ ರೋಗಿಗಳಿಗೆ ವಿತರಿಸಲಾಯಿತು.



--ಚಿತ್ರ.ಕೆ.-ಆರ್. ಶಂಕರ್.

ದಿನವೂ ಸಂಜೆ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿದ್ದವು. ಕರ್ನಾಟಕ ಸಂಗೀತ ನೃತ್ಯ ಅಕಾಡಮಿಯ ಸದಸ್ಯರಾದ ಶ್ರೀ ಎನ್.ಆರ್. ಜ್ಞಾನಮೂರ್ತಿ ಅವರು ಶ್ಯಮಂತಕೋಪಖ್ಯಾನವನ್ನು ನಡೆಸಿಕೊಟ್ಟರು. ನಾಟಕಗಳು, ಸುಗಮಸಂಗೀತ, ಯೋಗಾಸನ ಪ್ರದರ್ಶನ, ರಸಂಜೆ, ಭರತನಾಟ್ಯ ಮೊದಲಾದವು ನಡೆದವು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಸಂಗೀತ ನೃತ್ಯ ಅಕಾಡಮಿ, ಕೆ. ಎಸ್. ಆರ್ ಟಿ. ಸಿ., ಕನಕ ಮಹಿಳಾಮಂಡಳಿ, ವನಿತಾಮೈತ್ರಿಕೂಟ, ಸ್ನೇಹಸಂಪದ, ಪ್ರಯೋಗರಂಗ ಮೊದಲಾದ ಸಂಸ್ಥೆಗಳು ಕಾರ್ಯಕ್ರಮಯೋಜನೆಯಲ್ಲಿ ಸಹಕರಿಸಿದ್ದವು.

26--9--93 ರಂದು ಭಾನುವಾರ ಗಣಪತಿಯನ್ನು ಭವ್ಯವಾದ ಮೆರವಣಿಗೆಯಲ್ಲಿ ಸಮೂಹಗಾಯನ, ಭಜನೆಗಳ ನಡುವೆ ಬಿಜಯಗೈಸಿ ನಿಮಜ್ಜನಗೊಳಿಸಲಾಯಿತು.



# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ನವಂಬರ್ 1993

**ಹಂಪಿ ಕ್ಷೇತ್ರ ಪರಿಚಯ**
--ಡಿ. ರಾಮಕೃಷ್ಣರಾವ್

**ಕೇಳನೊ ಹರಿ........**
--ಕೆ. ಕೇಶವಮೂರ್ತಿ

**ಆಪಸ್ತಂಬರು**
--ಕೆ. ಕೇಶವನ್

**ಶುಚೀಂದ್ರಂ**
--ಗುರುಮೂರ್ತಿ ಪಿ.

**ಅನ್ನದ ಹಬ್ಬ -- ದೀಪಾವಳಿ**
--ಸಾ. ದೊಡ್ಡಯ್ಯಶಾಸ್ತ್ರಿ.

**ಜೊತೆಗೇ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು**

**ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

ಸೂಚನೆ : ಸಪ್ತಗಿರಿ ವಾರ್ಷಿಕ ಚಂದಾ ಇಪ್ಪತ್ನಾಲ್ಕು ರೂಪಾಯಿ ಮಾತ್ರ. ತಮ್ಮ ಚಂದಾ ಹಣವನ್ನು ಎಂ. ಓ. ಡಿ. ಡಿ. ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ -- ಇವರಿಗೆ ಕಳುಹಿಸಿ. ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ ಎಂದು ವಿನಂತಿ.

# ತಿಂಗಳಿನ ಮುಖ್ಯದಿನಗಳು

## ನವಂಬರ್ --- 1993

| | |
|---|---|
| 1. ಸೋಮವಾರ | ಕರ್ನಾಟಕ ರಾಜ್ಯೋತ್ಸವ. |
| 6. ಶನಿವಾರ | ತಿರುಮಲನಂಬಿ ಉತ್ಸವಾರಂಭ. |
| 9. ಮಂಗಳವಾರ | ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವ ಅಂಕುರಾರ್ಪಣ. |
| 12. ಶುಕ್ರವಾರ | ನರಕಚತುರ್ದಶಿ. |
| 13. ಶನಿವಾರ | ಕೇದಾರವ್ರತ, ಧನಲಕ್ಷ್ಮೀ ಪೂಜೆ. |
| 14. ಭಾನುವಾರ | ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವದ ಗಜವಾಹನ. |
| 15. ಸೋಮವಾರ | ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವದ ಗರುಡವಾಹನ. ತಿರುಮಲೆನಂಬಿ ಶಾತ್ತುಮೊರೆ. |
| 17. ಬುಧವಾರ | ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವದ ರಥೋತ್ಸವ. |
| 19. ಶುಕ್ರವಾರ | ಸ್ಕಂದಷಷ್ಠಿ, ತಿರುಮಂಗೈ ಆಳ್ವಾರ್ ವರ್ಷ ತಿರುನಕ್ಷತ್ರ. |
| 20. ಶನಿವಾರ | ತಿರುಮಲೆಯಲ್ಲಿ ಪುಷ್ಪಯಾಗ. |
| 23. ಮಂಗಳವಾರ | ಯಾಜ್ಞವಲ್ಕ್ಯ ಜಯಂತಿ. |
| 25. ಗುರುವಾರ | ನಾರಾಯಣವನಂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವಾರಂಭ. |
| 29. ಸೋಮವಾರ | ನಾರಾಯಣವನಂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವ ಸಮಾಪ್ತಿ. ತಿರುಪ್ಪಾಣಿ ಆಳ್ವಾರ್ ವರ್ಷ ತಿರುನಕ್ಷತ್ರ. |

## ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ

**ಕಪಿಲತೀರ್ಥ, ತಿರುಪತಿ.**

ತಿರುಪತಿಯ ಕಪಿಲತೀರ್ಥದಲ್ಲಿರುವ
ಶ್ರೀ ಕಪಿಲೇಶ್ವರಸ್ವಾಮಿ
ದೇವಾಲಯದಲ್ಲಿ ಆಸ್ತಿಕ
ಭಕ್ತ ಪ್ರಯೋಜನಕ್ಕಾಗಿ--

ನಿತ್ಯಾಭಿಷೇಕ ಸೇವೆ

--ಏರ್ಪಡಿಸಲಾಗಿದೆ. ವರ್ಷಕ್ಕೆ ೪೨ ರೂಪಾಯಿ ಶುಲ್ಕ ಅಥವಾ ಒಂದೇ ಬಾರಿಗೆ ೫೦೦ ರೂಗಳ ಇಡುಗಂಟು ಹಾಗೂ ೪೨ ರೂಗಳ ಆರಂಭವರ್ಷದ ಶುಲ್ಕವನ್ನು ನೀಡುವುದರ ಮೂಲಕ ಈ ಸೇವೆಯನ್ನು ನಡೆಸಬಹುದಾಗಿದೆ. ವರ್ಷದಲ್ಲಿ ಎರಡು ಬಾರಿ ಇಬ್ಬರು ವಯಸ್ಕರನ್ನು ಈ ಸೇವೆಯ ಸಂದರ್ಶನಕ್ಕೆ ಅನುಮತಿಸಲಾಗುವುದು.

ಭಕ್ತರು ಈ ಸೌಲಭ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

**ತಿ. ತಿ. ದೇ.**

## ಶ್ರೀ ಬಾಲಾಜೀ ವಿಕಲಾಂಗ ಆಸ್ಪತ್ರೆ

**ತಿ. ತಿ. ದೇ. ತಿರುಪತಿ.**

ತಿರುಮಲೆ ತಿರುಪತಿ ದೇವಸ್ಥಾನಗಳ ಶ್ರೀ ಬಾಲಾಜೀ ವಿಕಲಾಂಗರ ಆಸ್ಪತ್ರೆಯಲ್ಲಿ ಕೃತಕ ಅವಯವಗಳನ್ನು ವಿಕಲಾಂಗರಿಗೆ ಉಚಿತವಾಗಿ ನೀಡುವ ಯೋಜನೆಯಿದ್ದು, ಸದರಿ ಮಾನವೋಪಯೋಗಿ ಯೋಜನೆಗೆ ದಾನಿಗಳು ಉದಾರವಾಗಿ ವಂತಿಗೆಯನ್ನು ನೀಡಲು ಅವಕಾಶವಿದೆ.

ದಾನಿಗಳು ಈ ಅವಕಾಶವನ್ನು ಬಳಸಿಕೊಂಡು ಈ ಘನೋದ್ದೇಶದ ಯೋಜನೆಯ ಸಾಫಲ್ಯಕ್ಕೆ ನೆರವಾಗಬೇಕೆಂದು ಬೇಡಲಾಗಿದೆ.

**ತಿ. ತಿ. ದೇ.**

Edited and published on behalf of T.T. Devasthanams by K. Subba Rao, M.A., and Printed at T.T.D. Press
by M. Vijayakumar Reddy, Manager, T.T.D. Press, Tirupati - 517 507

